# ಖಾಜಾ ಬಂದೇನವಾಜ್ ಮತ್ತು ಶರಣಬಸವೇಶ್ವರ ಜಾತ್ರೆಗಳು: ಒಂದು ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಚರಿತ್ರೆ ವಿಭಾಗಕ್ಕೆ ಎಂ.ಫಿಲ್.ಪದವಿಗಾಗಿ ಸಾದರಪಡಿಸಿದ ನಿಬಂಧ)


ಸಂಶೋಧಕ

ಸಂತೋಷಕುಮಾರ್

ಮಾರ್ಗದರ್ಶಕರು

ಡಾ. ವಿಜಯ್ ಪೂಣಚ್ಚ ತಂಬಂಡ

ಪ್ರಾಧ್ಯಾಪಕರು






ಚರಿತ್ರೆ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೨

# ಖಾಜಾ ಬಂದೇನವಾಜ್ ಮತ್ತು ಶರಣಬಸವೇಶ್ವರ ಜಾತ್ರೆಗಳು: ಒಂದು ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಚರಿತ್ರೆ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ನಿಬಂಧ )

ಸಂಶೋಧಕ
ಸಂತೋಷಕುಮಾರ್

ಮಾರ್ಗದರ್ಶಕರು
ಡಾ. ವಿಜಯ್ ಪೂಣಚ್ಚ ತಂಬಂಡ
ಪ್ರಾಧ್ಯಾಪಕರು



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೨

# ದೃಢೀಕರಣ ಪತ್ರ

ಖಾಜಾ ಬಂದೇನವಾಜ್ ಮತ್ತು ಶರಣಬಸವೇಶ್ವರ ಜಾತ್ರೆಗಳು: ಒಂದು ಸಾಂಸ್ಕೃತಿಕ ಅಧ್ಯಯನ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸಂತೋಷಕುಮಾರ್ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : 23.7.12

ಡಾ. ವಿಜಯ್ ಪೂಣಚ್ಚ ತಂಬಂಡ
ಮಾರ್ಗದರ್ಶಕರು ಹಾಗೂ ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪ್ರಮಾಣ ಪತ್ರ

ಖಾಜಾ ಬಂದೇನವಾಜ್ ಮತ್ತು ಶರಣಬಸವೇಶ್ವರ ಜಾತ್ರೆಗಳು: ಒಂದು ಸಾಂಸ್ಕೃತಿಕ ಅಧ್ಯಯನ ಎಂಬ ನಿಬಂಧವನ್ನು ಡಾ. ವಿಜಯ್ ಪೂಣಚ್ಚ ತಂಬಂಡ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : 23/7/12

(ಸಂತೋಷಕುಮಾರ್)
ಸಂಶೋಧಕ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

ಅಧ್ಯಾಯ ಒಂದು : ಪ್ರಸ್ತಾವನೆ ೧ - ೨೫

೧.೧. ಪೀಠಿಕೆ

೧.೨. ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

೧.೩. ಭೌಗೋಳಿಕ ಪರಿಸರ

೧.೪. ಐತಿಹಾಸಿಕ ಹಿನ್ನೆಲೆ

೧.೫. ಜಾತ್ರೆಗಳ ಲಕ್ಷಣಗಳು

೧.೬. ಜಾತ್ರೆ ಸಾಂಪ್ರದಾಯಿಕ ವಿಧಿ-ವಿಧಾನಗಳು

೧.೭. ಉಪಸಂಹಾರ

ಅಧ್ಯಾಯ ಎರಡು : ಖಾಜಾ ಬಂದೇನವಾಜ್ ಉರುಸ್: ವ್ಯಾಪ್ತಿ ಮತ್ತು ಸ್ವರೂಪ ೨೬ - ೫೯

೨.೧. ಪೀಠಿಕೆ

೨.೨. ಖಾಜಾ ಬಂದೇನವಾಜ್ ಹುಟ್ಟು, ಗುಲಬರ್ಗಾಕ್ಕೆ ಆಗಮನ

೨.೩. ಖಾಜಾ ಬಂದೇನವಾಜ್ ಅವರ ಸಿದ್ಧಾಂತಗಳು

೨.೪. ಖಾಜಾ ಬಂದೇನವಾಜ್ ದರ್ಗಾದ ಉರುಸ್ ವಿಧಿ-ವಿಧಾನಗಳು

೨.೫. ಖಾಜಾ ಬಂದೇನವಾಜ್ ಟ್ರಸ್ಟ್ ಸ್ಥಾಪನೆ ಮತ್ತು ಶೈಕ್ಷಣಿಕ ಕೇಂದ್ರಗಳು

೨.೬. ಉಪಸಂಹಾರ

ಅಧ್ಯಾಯ ಮೂರು : ಶರಣಬಸವೇಶ್ವರ ಜಾತ್ರೆಯ ವ್ಯಾಪ್ತಿ ಮತ್ತು ಸ್ವರೂಪ ೬೦ - ೭೯

೩.೧. ಪೀಠಿಕೆ

೩.೨. ಶರಣಬಸವೇಶ್ವರ ಅವರ ಹಿನ್ನೆಲೆ

೩.೩. ಶರಣಬಸವೇಶ್ವರ ಜಾತ್ರೆಯಲ್ಲಿ ಆಚರಿಸುವ ವಿಧಿ-ವಿಧಾನಗಳು

೩.೪. ಶರಣಬಸವೇಶ್ವರ ಶೈಕ್ಷಣಿಕ ಕೇಂದ್ರಗಳು

೩.೫. ಉಪಸಂಹಾರ

ಅಧ್ಯಾಯ ನಾಲ್ಕು : ಉರುಸು ಮತ್ತು ಜಾತ್ರೆ: ಸಾಂಸ್ಕೃತಿಕ ಆಯಾಮಗಳು ೮೦ - ೯೭

೪.೧. ಪೀಠಿಕೆ

೪.೨. ಸಂಘರ್ಷಗಳು

೪.೩. ಸಾಮರಸ್ಯ

೪.೪. ಉಪಸಂಹಾರ

ಅಧ್ಯಾಯ ಐದು : ಸಮಾರೋಪ ೯೮ - ೧೦೦

ಅನುಬಂಧ ೧೦೧ - ೧೧೭

೧. ಪರಾಮರ್ಶನ ಗ್ರಂಥಗಳು

೨. ನಕ್ಷೆಗಳು

೩. ಶರಣಬಸವೇಶ್ವರರ ಕುರಿತು ಸಂಕ್ಷಿಪ್ತ ಮಾಹಿತಿ

೪. ಖಾಜಾ ಬಂದೇನವಾಜ್ ಕುರಿತು ಸಂಕ್ಷಿಪ್ತ ಮಾಹಿತಿ

೫. ಛಾಯಾಚಿತ್ರಗಳು

# ಅಧ್ಯಾಯ ಒಂದು

## ಪ್ರಸ್ತಾವನೆ

೧.೧. ಪೀಠಿಕೆ

೧.೨. ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

೧.೩. ಭೌಗೋಳಿಕ ಪರಿಸರ

೧.೪. ಐತಿಹಾಸಿಕ ಹಿನ್ನೆಲೆ

೧.೫. ಜಾತ್ರೆಗಳ ಲಕ್ಷಣಗಳು

೧.೬. ಜಾತ್ರೆ ಸಾಂಪ್ರದಾಯಿಕ ವಿಧಿ-ವಿಧಾನಗಳು

೧.೭. ಉಪಸಂಹಾರ

೧.೧. ಪೀಠಿಕೆ

ಭಾರತದಲ್ಲಿ ಇತ್ತೀಚಿನ ಬೆಳವಣಿಗೆಯಾಗುತ್ತಿರುವ ಚರಿತ್ರೆ ಬರವಣಿಗೆಗಳಲ್ಲಿ ಜನರ ಚರಿತ್ರೆ ಬರವಣಿಗೆಯು ಮುಖ್ಯವಾದ ಸ್ಥಾನವನ್ನು ಪಡೆದುಕೊಳ್ಳುತ್ತಿದೆ. ಕರ್ನಾಟಕದ ಚರಿತ್ರೆ ಬರವಣಿಗೆಯೂ ಇದರಿಂದ ಹೊರತಾಗಿಲ್ಲ. ಶಿಷ್ಟ ಚರಿತ್ರೆಯಲ್ಲಿ ಗ್ರಾಮೀಣ ಭಾಗದ ಜನರು ಅವರ ಆಚರಣೆ, ನಂಬುಗೆಗಳ ಹಾಗೂ ಅವುಗಳ ಮೂಲಕ ರೂಪಿಸಿಕೊಂಡಿರುವ ಸಮಾಜದ ಅಧ್ಯಯನಗಳು ಬಹಳ ವಿರಳ. ಸಮಾಜದ ಚರಿತ್ರೆಯನ್ನು ಬರೆಯುವ ಸಂದರ್ಭದಲ್ಲಿ ಶಿಷ್ಟ ಚರಿತ್ರೆಯು ಎತ್ತಿರುವ ಪ್ರಶ್ನೆಗಳೊಂದಿಗೆ ಜಾನಪದೀಯ ಚರಿತ್ರೆಯ ಆಯಾಮಗಳು ಬಹಳ ಮುಖ್ಯವಾಗುತ್ತದೆ. ಸ್ಥಳೀಯ ಚರಿತ್ರೆಯ ಬಹಳ ಮುಖ್ಯವಾದ ಆಯಾಮವಾದ ಮೌಖಿಕ ಸಂಪ್ರದಾಯಗಳು, ಆಚರಣೆಗಳು ಈ ಸಂದರ್ಭದಲ್ಲಿ ಆಧುನಿಕ ಚರಿತ್ರೆ ಬರವಣಿಗೆಯಲ್ಲಿ ಮುಖ್ಯ ಪಾತ್ರವನ್ನು ವಹಿಸುತ್ತದೆ. ಪ್ರಸ್ತುತ ಅಧ್ಯಯನವು ಈ ಹಿನ್ನೆಲೆಯಲ್ಲಿ ಇಂದಿಗೂ ಜೀವಂತವಾಗಿರುವ ಅಂತಹ ಸಂಪ್ರದಾಯಗಳನ್ನು ದಾಖಲಿಸಿ ಅವುಗಳನ್ನು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲು ಯತ್ನಿಸುತ್ತದೆ. ಖಾಜಾ ಬಂದೇನವಾಜ್ ಮತ್ತು ಶರಣಬಸವೇಶ್ವರ ಜಾತ್ರೆಗಳು ಗುಲಬರ್ಗಾ ಜನರ ಸಾಂಸ್ಕೃತಿಕ ಹೆಗ್ಗುರುತುಗಳು. ಮೇಲ್ನೋಟಕ್ಕೆ ಒಂದು ಇಸ್ಲಾಂಗೆ ಸಂಬಂಧಿಸಿದಂತೆ, ಮಗದೊಂದು ಶರಣ ಸಂಸ್ಕೃತಿಗೆ ಸಂಬಂಧಪಟ್ಟಂತೆ ಕಂಡರೂ ಅಂತರ್ಯದಲ್ಲಿ ಪರಸ್ಪರ ಹೊಂದಾಣಿಕೆಯಿಂದ ಮತ್ತು ಕೆಲವೊಮ್ಮೆ 'ಧರ್ಮ'ದ ವ್ಯಾಪ್ತಿಯ ಹೊರತಾಗಿಯೂ ಇರುವುದು ಕಂಡುಬರುತ್ತದೆ. ಹತ್ತಾರು ಸಾವಿರ ಜನರು ನೇರವಾಗಿ ಪಾಲ್ಗೊಳ್ಳುವ ಈ ಜಾತ್ರೆಗಳು ಕರ್ನಾಟಕದ ಸಾಮಾಜಿಕ ಚರಿತ್ರೆಯ ಅವಿಭಾಜ್ಯ ಭಾಗಗಳು. ಈ ವಿಷಯವನ್ನು ಕೇಂದ್ರವಾಗಿಟ್ಟುಕೊಂಡು ಪ್ರಸ್ತುತ ನಿಬಂಧವು ಜನರ ಹಾಗೂ ಇತಿಹಾಸವನ್ನು ಅವಲೋಕನ ಮಾಡುವಾಗ ಧರ್ಮವು ಚರಿತ್ರೆಯಲ್ಲಿ ಮಹತ್ವವನ್ನು ಪಡೆದಿರುವುದನ್ನು ನೋಡಬಹುದು.

ಜಾತ್ರೆಯು ಇತಿಹಾಸದ ಒಂದು ಭಾಗ. ಹಿಂದೂಗಳು ಜಾತ್ರೆಗಳನ್ನು ದೇವಾನುದೇವತೆಗಳ ಹೆಸರಿನಲ್ಲಿ ಆಚರಿಸುವುದು ವಾಡಿಕೆ. ಅದಲ್ಲದೆ, ಇತರೆ ಶರಣ ಶರಣೆಯರ ಸ್ಮರಣೆಗಾಗಿ ವರ್ಷಕ್ಕೆ ಒಮ್ಮೆ ಅತ್ಯಂತ ಸಡಗರದಿಂದ ಉತ್ಸವಗಳನ್ನು ಏರ್ಪಡಿಸುವರು. ಹೀಗೆ ಕರ್ನಾಟಕದಾದ್ಯಂತ ಪ್ರಮುಖ ಜಿಲ್ಲೆಗಳಲ್ಲಿ ಜರುಗುವುದು ನಮ್ಮ ಗಮನಕ್ಕೆ ಗೋಚರಗೊಂಡಿದೆ. ಅದೇ ಪ್ರಕಾರವಾಗಿ ಹೈದರಾಬಾದ್‌ಕರ್ನಾಟಕ ಭಾಗಗಳಲ್ಲೂ ಹಿಂದೂ-ಮುಸ್ಲಿಂ ಸಮುದಾಯಗಳು ಜಾತ್ರೆಗಳನ್ನು ಮತ್ತು ಉರುಸ್‌ಗಳನ್ನು ಆಚರಿಸುತ್ತವೆ. ಬೀದರ್, ರಾಯಚೂರು, ಕೊಪ್ಪಳ, ಬಳ್ಳಾರಿ ಪ್ರದೇಶಗಳಲ್ಲಿ ಜಾತ್ರೆಗಳು ವಿಜೃಂಭಣೆಯಿಂದಾಗುವಂತೆ ಗುಲಬರ್ಗಾದಲ್ಲೂ ಜಾತ್ರೆಗಳು, ಮುಸ್ಲಿಮರ ಉರುಸ್‌ಗಳು ನಡೆಯುತ್ತವೆ.

ಬಹಮನಿ ಸಾಮ್ರಾಜ್ಯದ ಆಳ್ವಿಕೆಯ ಸಂದರ್ಭದಲ್ಲಿ ಸೂಫಿ ಸಂತ ಸೈಯದ್ ಗೇಸೂದರಾಜ್ ಅವರು ಗುಲಬರ್ಗಾಕ್ಕೆ ಆಗಮಿಸಿದರು. ಇವರ ಅಧ್ಯಾತ್ಮದ ಜ್ಞಾನಕ್ಕೆ ಮಾರುಹೋಗಿ ಆ ಸಾಮ್ರಾಜ್ಯದ ಸುಲ್ತಾನ ಫಿರೋಜ್ ಶಾಹನು ಆಶ್ರಯವನ್ನು ನೀಡಿದ್ದನು. ಈ ಪ್ರಕಾರವಾಗಿ ಬಂದೇನವಾಜ್ ಅವರು ಇಡೀ ದಕ್ಷಿಣ ಭಾರತದ ತುಂಬ ಅವರ ಉಪದೇಶಗಳು ಮತ್ತು ಜ್ಞಾನದಿಂದ ಚಿರಪರಿಚಿತಗೊಂಡರು. ಬಂದೇನವಾಜ್ ಮರಣಾನಂತರ ಅವರ ವಂಶಾವಳಿಗಳು ಈಗಲೂ ಮುಂದುವರೆದುಕೊಂಡು ಬಂದಿವೆ. ಬಂದೇನವಾಜ್ ಅವರ ಹೆಸರಿನಲ್ಲಿ ವರ್ಷದ ಕೊನೆಯ ಡಿಸೆಂಬರ್ ತಿಂಗಳಿನಲ್ಲಿ ಉರುಸ್ ಆಚರಿಸುವರು. ಇದಲ್ಲದೆ, ಹಿಂದೂಗಳು ಕೂಡ ಶರಣಬಸವೇಶ್ವರರ ಮಹಿಮೆ ಪೂರಕವಾಗಿ ಜಾತ್ರೆಯನ್ನು ವಿಜೃಂಭಣೆಯಿಂದ ಕೈಗೊಳ್ಳುವರು. ಇವರು ಮೂಲತಃ ಕನ್ನಡಿಗರು ಮತ್ತು ಅದರಲ್ಲೂ ಗುಲಬರ್ಗಾ ಜಿಲ್ಲೆಯ ಜೇವರ್ಗಿ ತಾಲೂಕಿನ ಅರಳಗುಂಡಗಿ ಗ್ರಾಮದವರು. ಈ ಮಹಾನ್ ಶರಣರ ಹೆಸರಿನಲ್ಲೂ ಜಾತ್ರೆಯನ್ನು ಆರಂಭದಿಂದಲೂ ಅನುಸರಿಸಿಕೊಂಡು ಬಂದ ವಿಧಿ ವಿಧಾನಗಳನ್ನು ಈಗಲೂ ಚಾಚೂತಪ್ಪದೆ ಮುಂದುವರೆದಿವೆ. ಹಿಂದೂ-ಮುಸ್ಲಿಮರು ಈ ಭಾಗದಲ್ಲಿ ಐಕ್ಯತೆಯಿಂದ ಬಾಳ್ವೆ ಮಾಡುತ್ತಿದ್ದಾರೆ.

ಶರಣಬಸವೇಶ್ವರರು ಅಧ್ಯಾತ್ಮದ ಜ್ಞಾನ ಹೊಂದಿ ಇತರ ವರ್ಗಗಳ ಜನರಿಗೆ ಯಾವುದೇ ತಾರತಮ್ಯ ದೃಷ್ಟಿಯಿಂದ ಕಾಣದೆ ಸಕಲ ಜೀವರಾಶಿಗಳು ದೈವದತ್ತವಾಗಿ ಹುಟ್ಟಿಕೊಂಡಿವೆ. ಅದರಿಂದ ಸಮಾಜ ಸೇವೆಯನ್ನು ಮಾಡುತ್ತ ಗುಲಬರ್ಗಾ ಪ್ರದೇಶಕ್ಕೆ ಬಂದು ನೆಲೆ ನಿಂತರು. ಇತರ ಧರ್ಮಗಳ ತತ್ವಗಳು ಆ ಸಮಯದಲ್ಲಿ ಪ್ರಭುತ್ವವನ್ನು ಹೊಂದಿತ್ತು. ಅವುಗಳೊಂದಿಗೆ ವೈದಿಕ ಧರ್ಮದಲ್ಲಿನ ಕೆಲವು ಜಟಿಲ ಕಂದಾಚಾರಗಳನ್ನು ವಿರೋಧಿಸಿ ಸರಳ ಸಜ್ಜನಿಕೆಯ ಮಾರ್ಗವನ್ನು ತೋರ್ಪಡಿಸಿದರು. ಅವರು ಸರ್ವಮತ ಸಮನ್ವಯ ಸಿದ್ಧಾಂತವನ್ನು ಸಾರ್ವಜನಿಕರಲ್ಲಿ ಬೋಧಿಸಿದರು.

ಪ್ರಸ್ತುತ ಅಧ್ಯಾಯದ ಮೊದಲನೇ ಭಾಗದಲ್ಲಿ ಧಾರ್ಮಿಕ ಐಕ್ಯತೆ, ಪರಸ್ಪರ ಸಾಮರಸ್ಯದ ಚಿಂತನೆಗಳು ಜನಸಾಮಾನ್ಯರಿಗೆ ತಿಳಿಯಪಡಿಸಲು ಪ್ರಯತ್ನಿಸಲಾಗುವುದು. ಅಧ್ಯಾಯದ ಎರಡನೆಯ ಭಾಗವು ವ್ಯಾಪ್ತಿಯನ್ನು ಕುರಿತು ವಿವರಿಸಲು ಯತ್ನಿಸಿದೆ. ಹಿಂದೂ ಇಸ್ಲಾಂ ಧರ್ಮಗಳ ನಡುವಿನ ನೂರಾರು ವರ್ಷಗಳ ಸಾಮರಷ್ಯವನ್ನು ಅಭ್ಯಾಸಿಸುವ ಪ್ರಯತ್ನವನ್ನು ಮಾಡಲಾಗಿದೆ.

ಮೂರನೇ ಭಾಗದಲ್ಲಿ ಕ್ಷೇತ್ರಕಾರ್ಯ ಆಕರ, ಅನುಷಂಗಿಕ ಮತ್ತು ಮೌಖಿಕ ಆಕರಗಳನ್ನು ಅಳವಡಿಸಿಕೊಂಡ ಬಗ್ಗೆ ಚರ್ಚಿಸಲಾಗಿದೆ.

ಈ ಪ್ರದೇಶವು ಸಾಂಸ್ಕೃತಿಕವಾಗಿ ಗುರುತಿಸಿಕೊಂಡು ರಾಜಕೀಯವಾಗಿ ಸ್ಥಿತ್ಯಂತರಕ್ಕೆ ಒಳಪಟ್ಟಿರುವ ಅಂಶಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

ಸಮಾರೋಪದಲ್ಲಿ ಇಲ್ಲಿಯವರೆಗೆ ಚರ್ಚಿಸಲಾಗಿರುವ ಅಂಶಗಳ ಹಿನ್ನೆಲೆಯಲ್ಲಿ ಫಲಿತಗಳನ್ನು ನೀಡಲು ಪ್ರಯತ್ನಿಸಲಾಗಿದೆ.

೧.೨. ಉದ್ದೇಶ

ಹೈದರಾಬಾದ್ ಕರ್ನಾಟಕ ಗಡಿಭಾಗದಲ್ಲಿನ ಹಿಂದೂ ಮುಸ್ಲಿಂ ಸಾಂಸ್ಕೃತಿಕ ಬಾಂಧವ್ಯದ ಸ್ವರೂಪವನ್ನು ಅರ್ಥ ಮಾಡಿಕೊಳ್ಳುವ ಉದ್ದೇಶವನ್ನು ಈ ಅಧ್ಯಯನವು ಹೊಂದಿದ್ದು ಇದಕ್ಕಾಗಿ ಈಗಲೂ ಜೀವಂತವಾಗಿರುವ ಮೊಹರಂ, ಉರುಸ್‌ನಂತಹ ಆಚರಣೆಗಳನ್ನು ಅಧ್ಯಯನ ಮಾಡುವುದರೊಂದಿಗೆ ಜನರ ಜೀವನ ವಿಧಾನವನ್ನು ಗ್ರಹಿಸುವ ಮುಖಾಂತರ ನಮ್ಮ ಸಾಂಸ್ಕೃತಿಕ ಆಶಯವನ್ನು ಹುಡುಕುವುದು ಮುಖ್ಯವಾಗಿದೆ. ಏಕೆಂದರೆ, ನಮ್ಮ ವಸಾಹತುಶಾಹಿಯ ಅಧ್ಯಯನದ ನೆಲೆಗಳು ಮತ್ತದರಿಂದ ಪ್ರಭಾವಿತಗೊಂಡ ಈಚಿನವರೆಗಿನ ಅಧ್ಯಯನ ಕ್ರಮಗಳು ಅಪೂರ್ಣವಾಗಿದ್ದು ಅವು ನಮ್ಮ ಸಾಂಸ್ಕೃತಿಕ ಆಶಯಗಳ ಸ್ವರೂಪದ ಪೂರ್ಣಚಿತ್ರಣವನ್ನು ನೀಡಲಾರವು. ಭಾರತೀಯ ಸಮಾಜವು ೨೦ನೇ ಶತಮಾನದ ಕೊನೆ ಹಾಗೂ ೨೧ನೇ ಶತಮಾನದ ಆರಂಭದಲ್ಲಿ ಅತ್ಯಂತ ಪ್ರಮುಖವಾಗಿ ಧಾರ್ಮಿಕ ನಂಬಿಕೆಗೆ ಹಾಗೂ ಸಂಸ್ಕೃತಿ ಸಂರಕ್ಷಣೆ ಎಂಬಂತಹ ವಿಷಯಸೂಚಿಯನ್ನು ಜನರ ಜೀವನದ ಮುಂದಿಟ್ಟಿದೆ. ಅವು ಕೋಮುವಾದ ಹಾಗೂ ಜನಪರವಾದ ಎಂಬ ಎರಡು ವಿಭಿನ್ನ ಧ್ರುವಗಳಲ್ಲಿ ಕೇಂದ್ರೀಕೃತವಾಗಿ ಜನಸಮೂಹಗಳನ್ನು ಪ್ರಭಾವಿಸುತ್ತವೆ. ಇಂತಹ ಸಂದರ್ಭದಲ್ಲಿ ಧಾರ್ಮಿಕ ಆಚರಣೆಗಳು ಹಾಗೂ ಪ್ರತ್ಯೇಕ ಸಮುದಾಯದ ನಿರ್ಮಾಣದ ಆಶಯಗಳು ಪ್ರಧಾನವಾಗಿದೆ. ಮನುಷ್ಯನ ಬದುಕಿಗೂ ಇತರ ಮಾನವಾತೀತ ಶಕ್ತಿಗಳಿಗೂ, ಇರುವ ಸಂಬಂಧವನ್ನು ಅನ್ವೇಷಕ ದೃಷ್ಟಿಯಿಂದ ಧ್ಯಾನಿಸುವ ಇಂತಹ ತಾತ್ವಿಕ ನೆಲೆಗಳು ನಮ್ಮ ಸಾಮಾನ್ಯ ಜನಸಮೂಹಗಳು ನಮ್ಮ ಮುಂದಿಟ್ಟಿರುವ ಪರಿಶೀಲನಾರ್ಹ ಮಾದರಿಗಳಂತಿವೆ.

೧. ವ್ಯಾಪ್ತಿ

ಗುಲಬರ್ಗಾ ಜಿಲ್ಲೆಯ ಸುತ್ತಮುತ್ತಲಿನ ತಾಲೂಕು ಮತ್ತು ಗ್ರಾಮಗಳಲ್ಲಿ ಅನೇಕ ಧಾರ್ಮಿಕ ಕೇಂದ್ರಗಳು ನೆಲೆಗೊಂಡಿವೆ. ಇವು ಜನತೆಯ ಮೇಲೆ ಅಗಾಧವಾದ ಪ್ರಭಾವ ಬೀರಿವೆ. ಅದರ ಪರಿಣಾಮವಾಗಿ ಜನಸಮುದಾಯಗಳು ಜಾತ್ರೆಗಳು ಹಾಗೂ ಉರುಸ್‌ಗಳನ್ನು ಹಮ್ಮಿಕೊಂಡು ಸಡಗರದಿಂದ ಆಚರಿಸುವರು. ಪರಿಸರದಲ್ಲಿ ಮಹಾನ್ ಸೂಫಿ ಪಂಥದ ಸಂತರು, ಹಾಗೇಯೇ ಹಿಂದೂ ಧರ್ಮದ ಶಿವಶರಣರು ಅವರ ಅಲೌಕಿಕ ಶಕ್ತಿಯಿಂದ ಜನತೆಗೆ ಒಳಿತನ್ನು ಮಾಡಿದ್ದಾರೆಂಬ ನಂಬಿಕೆ ಇಲ್ಲಿನ ಬಹುತೇಕರದಾಗಿದೆ. ಗುಲಬರ್ಗಾ ತಾಲೂಕಿನ ಸಾವಳಗಿ ಮಹಮ್ಮದ್ ಸಾಹೇಬ, ಸಾವಳಗಿಯ ಶಿವಲಿಂಗಸ್ವಾಮಿ, ಚಿತ್ತಾಪುರ ತಾಲೂಕಿನ ಕಾಳಗಿಯ ಮಶಾಕ್‌ಸಾಬ್, ಮಹಾಗಾಂವ್ ಮೀರಸಾಬ್ ಇಂತಹ ಧರ್ಮ ಪ್ರಚಾರಕರು ಮತ್ತು ಅವರ ಆದರ್ಶದ ಜೀವನವು ಮುಂದಿನ ಪೀಳಿಗೆಗೆ ಮಾದರಿಯಾಗಿವೆ. ಇಂತಹ ಸಂತರುಗಳಲ್ಲಿಯೇ ಅಸಾಮಾನ್ಯ ಮತ್ತು ಪ್ರಮುಖ ವ್ಯಕ್ತಿತ್ವವನ್ನು ಹೊಂದಿದ್ದ ಶ್ರೀ ಶರಣಬಸವೇಶ್ವರ ಹಾಗೂ ಸೂಫಿ ಸಂತ ಖಾಜಾ ಬಂದೇನವಾಜ್ ಅವರ ಪ್ರಭಾವ ಅಪಾರವಾದುದು. ಈ ಎರಡು ಸಂಸ್ಕೃತಿಗಳಲ್ಲಿನ ಆಚಾರ-ವಿಚಾರಗಳು, ಮತ್ತು ಪೂಜಾ ವಿಧಿ-ವಿಧಾನಗಳನ್ನು ತಮ್ಮ ದಿನನಿತ್ಯದ ಬದುಕಿನಲ್ಲಿ ಹೇಗೆ ಅಳವಡಿಸಿಕೊಂಡಿದ್ದರು ಎಂಬುದನ್ನು ಇಲ್ಲಿನ ಅಧ್ಯಯನದಲ್ಲಿ ಮಾಡಲು ಪ್ರಯತ್ನಿಸಲಾಗಿದೆ.

**ವಿಧಾನಗಳು**

ಪ್ರಸ್ತುತ ಅಧ್ಯಯನದ ವಿಷಯವು ಕೇಂದ್ರಗಳಲ್ಲಿ ಭಾಗಿಯಾಗಿರುವ ಮಾಹಿತಿದಾರರಿಂದ ಮಾಹಿತಿಗಳನ್ನು ಪಡೆದುಕೊಳ್ಳಲಾಗಿದ್ದು, ಮಾಹಿತಿಗಳ ಸಂಗ್ರಹಕ್ಕೆ ಅವಲೋಕನ ಪ್ರಶ್ನಾವಳಿ ಹಾಗೂ ಸಂದರ್ಶನ ವಿಧಾನಗಳನ್ನು ಅಳವಡಿಸಲಾಗಿದೆ. ಮಾಹಿತಿ ಸಂಗ್ರಹಣೆಯಲ್ಲಿ ಮಾಹಿತಿದಾರರೊಂದಿಗೆ ಪ್ರಶ್ನೆಗಳನ್ನು ಕೇಳುವ ಮುಖಾಂತರ ಹಾಗೂ ಅವರೊಂದಿಗೆ ಚರ್ಚಿಸುವ ಮುಖಾಂತರ ಕ್ರೋಡೀಕರಿಸಲಾಗಿದೆ. ಕೆಲವೊಂದು ಜಾತ್ರೆಯ ಆಚರಣೆಗಳಲ್ಲಿ ಭಾಗವಹಿಸುವ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ವಿವಿಧ ಸಂದರ್ಭದ ಆಚರಣೆಗಳನ್ನು ದಾಖಲು ಮಾಡುವ ಮೂಲಕ ಮಾಹಿತಿಗಳನ್ನು ಪಡೆಯಲಾಗಿದೆ. ಒಟ್ಟು ಅಧ್ಯಯನ ಉದ್ದೇಶಗಳಿಗೆ ಮತ್ತು ಸಂಶೋಧನೆಗೆ ಅವಶ್ಯಕ ಮಾಹಿತಿ ಮತ್ತು ವಿಷಯಗಳನ್ನು ಸಂಗ್ರಹಿಸಲು ದಾಖಲೆಗಳನ್ನು ಬಳಸಿಕೊಳ್ಳಲಾಗಿದೆ. ಈ ವಿಷಯಕ್ಕೆ ಸಂಬಂಧಿಸಿದ ವಿವರಗಳನ್ನು ಮಾಹಿತಿದಾರರು ಹಾಗೂ ವಿದ್ವಾಂಸರೊಂದಿಗೆ ಚರ್ಚಿಸಿ ಕಲೆಹಾಕಲಾಗಿದೆ. ಆನುಷಂಗಿಕ ಮತ್ತು ಐತಿಹ್ಯಗಳ ಮುಖಾಂತರ ಇನ್ನೂ ಹೆಚ್ಚು ವಿಷಯವನ್ನು ಕಲೆಹಾಕಲು ಪ್ರಯತ್ನಿಸಲಾಗಿದೆ.

**ಅಧ್ಯಯನ ಸ್ವರೂಪ**

ಸಂಶೋಧನೆ ಕ್ಷೇತ್ರದಲ್ಲಿ ತೊಡಗುವ ಸಮಯದಲ್ಲಿ ಒಂದು ವಿಷಯ ಆಯ್ಕೆ ಮಾಡಿಕೊಂಡು ಆ ವಿಷಯ ವಸ್ತುವಿಗೆ ಸಂಬಂಧಿಸಿದ ರೂಪರೇಷೆಗಳನ್ನು ಒಂದಾದ ಮೇಲೆ ಮಗದೊಂದು ಅಂಶಗಳನ್ನ ಬಿಡಿಬಿಡಿಯಾಗಿ ವಿಶ್ಲೇಷಣೆ ಮಾಡುವುದಾಗಿದೆ.

ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಒಟ್ಟು ಐದು ಅಧ್ಯಯನಗಳನ್ನಾಗಿ ಮಾಡಿಕೊಳ್ಳಲಾಗಿದೆ.

ಮೊದಲನೆಯ ಅಧ್ಯಾಯ ಪ್ರಸ್ತಾವನೆ ಜೊತೆಗೆ ಐತಿಹಾಸಿಕ, ಭೌಗೋಳಿಕ ಮತ್ತು ಜಾತ್ರೆಗಳ ಲಕ್ಷಣಗಳು, ಮಹತ್ವ ಹಾಗೂ ಜಾತ್ರೆಯ ಸಾಂಪ್ರದಾಯಿಕ ವಿಧಿ-ವಿಧಾನಗಳು ಕುರಿತು ಚರ್ಚಿಸಲು ಪ್ರಯತ್ನಿಸಲಾಗಿದೆ.

ಎರಡನೆಯ ಅಧ್ಯಾಯವು 'ಖಾಜಾ ಬಂದೇನವಾಜ್ ಉರುಸ್ ವ್ಯಾಪ್ತಿ ಮತ್ತು ಸ್ವರೂಪ' ಎಂದು ನಿರ್ಧರಿಸಿದೆ. ಇಲ್ಲಿ ಬಂದೇನವಾಜ್ ಸೂಫಿಯ ಹುಟ್ಟು ಮತ್ತು ಗುಲಬರ್ಗಾಕ್ಕೆ ಬಂದು ನೆಲೆಸಿ ಅವರ ಅಧ್ಯಾತ್ಮದ ಗುರಿ ಸಾಧನೆಗಳು ಮತ್ತು ಸಿದ್ಧಾಂತಗಳನ್ನು ಜನತೆ ತಿಳಿಯಪಡಿಸುವ ಶೈಲಿಯನ್ನು ಕುರಿತು ವಿವರಿಸಲು ಯತ್ನಿಸಲಾಗಿದೆ.

ಅಧ್ಯಾಯ ಮೂರರಲ್ಲಿ 'ಶರಣಬಸವೇಶ್ವರರ ಜಾತ್ರೆಯ ವ್ಯಾಪ್ತಿ ಮತ್ತು ಸ್ವರೂಪ' ಇದರಲ್ಲಿ ಶರಣಬಸವೇಶ್ವರರ ಹಿನ್ನೆಲೆ, ಶರಣಬಸವೇಶ್ವರ ಜಾತ್ರೆಯಲ್ಲಿ ಆಚರಿಸುವ ವಿಧಿ-ವಿಧಾನಗಳು ಹಾಗೂ ಅವರ ಪೀಠ ಸಂಸ್ಥಾನದಿಂದ ಶೈಕ್ಷಣಿಕ ಸಂಸ್ಥೆಯನ್ನು ಸ್ಥಾಪಿಸಿ, ಈ ಹೈದರಾಬಾದ್-ಕರ್ನಾಟಕ ಪ್ರದೇಶದ ಜನರಿಗೆ ಶಿಕ್ಷಣವನ್ನು ಒದಗಿಸುವುದರ ಮುಖಾಂತರ ಅದು ತನ್ನದೆಯಾದ ಕೊಡುಗೆಯನ್ನು ನೀಡುತ್ತಲಿದೆ ಎಂಬ ಅಂಶಗಳನ್ನು ಕೂಲಂಕಷವಾಗಿ ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ 'ಉರುಸ್ ಮತ್ತು ಜಾತ್ರೆ ಸಾಂಸ್ಕೃತಿಕ ಆಯಾಮಗಳು' ಎಂಬ ಭಾಗದಲ್ಲಿ ಎರಡು ಪ್ರಮುಖ ಅಂಶಗಳನ್ನು ಚರ್ಚೆಗೆ ಒಳಪಡಿಸಲಾಗಿದೆ. ಅವುಗಳೆಂದರೆ ೧. ಸಂಘರ್ಷಗಳು: ಧರ್ಮ, ಮತ, ಜಾತಿ, ಜನಾಂಗ ದ್ವೇಷ, ಅಸೂಯೆ, ಮತ್ಸರ ಇತ್ಯಾದಿ ಅಂಶಗಳ ಭಾವನೆಗಳಿಂದ ಸಂಭವಿಸಿ ಅದರಿಂದ ಆದ ಪರಿಣಾಮಗಳ ಕುರಿತು ಅಧ್ಯಯನ ಮಾಡವುದಾಗಿದೆ. ೨ನೇ ಅಂಶ 'ಸಾಮರಸ್ಯ'. ಇಲ್ಲಿ ಮೇಲಿನ

ಸಂಘರ್ಷಗಳ ಅಂಶದಿಂದ ಯಾವುದೇ ರೀತಿಯ ಧಾರ್ಮಿಕ ಆಚರಣೆಗಳಲ್ಲಿ ಜನರ ನಂಬಿಕೆಗಳಲ್ಲಿ ಬದಲಾವಣೆಗಳು ಕಂಡುಬರುವುದಿಲ್ಲ. ಹಿಂದೂ ಮುಸ್ಲಿಮರ ಪ್ರೀತಿ, ವಿಶ್ವಾಸಗಳಿಂದ ಒಬ್ಬರು ಇನ್ನೊಬ್ಬರ ಧರ್ಮಗಳನ್ನು ಗೌರವಿಸುವರು. ಅಲ್ಲದೆ ಸಾಮರಸ್ಯದಿಂದ ಜೀವನ ಮಾಡುತ್ತಿರುವುದರ ಕುರಿತು ಅಧ್ಯಯನದಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಐದನೆ ಅಧ್ಯಾಯ 'ಸಮಾರೋಪ'ವಾಗಿರುತ್ತದೆ.

ಈ ಪ್ರಕಾರವಾಗಿ ನಿಬಂಧದ ವಿಷಯ ವಸ್ತುವನ್ನು ನೈಜತೆಯ ಅಂಶಗಳ ಮೂಲಕ ವಿವರಿಸಲು ಶ್ರಮಿಸಲಾಗಿದೆ.

**೧.೩. ಭೌಗೋಳಿಕ ಪರಿಸರ**

ಭೌಗೋಳಿಕವಾಗಿ ದಖನ್ ಪ್ರಸ್ಥಭೂಮಿಯಲ್ಲಿರುವ ಕರ್ನಾಟಕದ ಉತ್ತರ ಭಾಗದ ಗುಲಬರ್ಗಾ ಜಿಲ್ಲೆಯು ಮಹಾರಾಷ್ಟ್ರ ಹಾಗೂ ಆಂಧ್ರಪ್ರದೇಶ ಗಡಿಯಂಚಿಗೆ ಹೊಂದಿಕೊಂಡಿದೆ. ಬೀದರ್, ಗುಲಬರ್ಗಾ, ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳನ್ನೊಳಗೊಂಡ ವಿಭಾಗೀಯ ಕೇಂದ್ರಸ್ಥಾನವಾಗಿರುವ ಗುಲಬರ್ಗಾ ಜಿಲ್ಲೆ ಐತಿಹಾಸಿಕ ಹಿನ್ನೆಲೆ ಹಾಗೂ ಪರಂಪರೆಯನ್ನು ಹೊಂದಿದೆ.

**ಭೌಗೋಳಿಕ ಪರಿಸರದ ಹಿನ್ನೆಲೆ**

ಒಂದು ಪ್ರದೇಶದ ಭೌಗೋಳಿಕ ಪರಿಸರದ ಅಧ್ಯಯನವು ಆ ಭಾಗದ ವಾಸ್ತವ ಸ್ಥಿತಿಯನ್ನು ತಿಳಿಸುವ ಪ್ರಮುಖ ಆಕರವಾಗಿರುತ್ತದೆ. ಆ ಪ್ರದೇಶದ ಹಿನ್ನಡೆ ಮತ್ತು ಮುನ್ನಡೆಗೆ ಭೌಗೋಳಿಕ ಪರಿಸರವೇ ಪ್ರಧಾನವಾಗಿದೆ. ಈ ಹಿನ್ನೆಲೆಯಲ್ಲಿ ಪೌರಾಣಿಕ ಹಿನ್ನೆಲೆಯುಳ್ಳ ಅನೇಕ ಸ್ಥಳಗಳಿದ್ದು ಕೆಲವು ಪವಿತ್ರ ಕ್ಷೇತ್ರಗಳೆಂದು ಜನಪ್ರಿಯವಾಗಿವೆ(ಕುಂಬಾರ ೨೦೦೯:೪, ಪಾಟೀಲ ೧೯೯೭:೩೩).

**ಗುಲಬರ್ಗಾ ಗಡಿಭಾಗಗಳು**

ಗುಲಬರ್ಗಾ ಜಿಲ್ಲೆಯು ಕರ್ನಾಟಕದ ಉತ್ತರ ಭಾಗಕ್ಕಿದ್ದು, ಜಿಲ್ಲೆಯ ಉತ್ತರಕ್ಕೆ ಬೀದರ್, ಪಶ್ಚಿಮಕ್ಕೆ ಬಿಜಾಪುರ ಮತ್ತು ದಕ್ಷಿಣಕ್ಕೆ ರಾಯಚೂರು ಜಿಲ್ಲೆಗಳಲ್ಲಿಂದ ಆವೃತವಾಗಿದೆ. ಇದರೊಂದಿಗೆ ಮಹಾರಾಷ್ಟ್ರದ ಉಸ್ಮಾನಾಬಾದ್ ಜಿಲ್ಲೆಯು ಉತ್ತರದಲ್ಲಿ, ಪೂರ್ವದಲ್ಲಿ ಆಂಧ್ರಪ್ರದೇಶದ ಮೇಡಕ್ ಮತ್ತು ಮೆಹಬೂಬನಗರ ಜಿಲ್ಲೆಗಳಾಗಿವೆ. ಮತ್ತು ಮಹಾರಾಷ್ಟ್ರದ ಸೊಲ್ಲಾಪುರ ಜಿಲ್ಲೆಯು ದಕ್ಷಿಣ ದಿಕ್ಕಿಗೆ ಸೇರಿದಂತಿದೆ. ಜಿಲ್ಲೆಯು ದಕ್ಷಿಣ ಪ್ರಸ್ಥಭೂಮಿಯಲ್ಲಿದ್ದು ಉತ್ತರದಿಂದ ಆಗ್ನೇಯಕ್ಕೆ ಸುಮಾರು ೧೦೦ ಕಿ.ಮೀಗಳಷ್ಟು ಉದ್ದದ ಬೆಟ್ಟ ಗುಡ್ಡಗಳನ್ನು ಹೊಂದಿದೆ (ಪಾಟೀಲ ೧೯೯೭: ೩೩, ಗೋಪಾಲ ೨೦೦೭: ೨೭೧).

**ವಿಸ್ತೀರ್ಣ ಮತ್ತು ಜನಸಂಖ್ಯೆ**

ಗುಲಬರ್ಗಾ ಜಿಲ್ಲೆಯು ಯಾದಗಿರಿ ಜಿಲ್ಲೆಯನ್ನು ತನ್ನ ಸಂಯೋಗದಲ್ಲಿ ಹೊಂದಿದಾಗ ಕರ್ನಾಟಕದಲ್ಲಿಯೇ ವಿಸ್ತೀರ್ಣದಲ್ಲಿ ಇದು ರಾಜ್ಯದ ಎರಡನೆಯ ದೊಡ್ಡ ಜಿಲ್ಲೆಯಾಗಿತ್ತು. ಆದರೆ ಇದು ಈಗ ತನ್ನ ಸ್ಥಾನವನ್ನು ಕಳೆದುಕೊಂಡಿದೆ. ಈಗ ಇದು ಕರ್ನಾಟಕದ ರಾಜ್ಯದಲ್ಲಿ ವಿಸ್ತೀರ್ಣತೆ ಹೊಂದಿದ ಪ್ರಮುಖ ಜಿಲ್ಲೆಗಳಲ್ಲಿ ಒಂದಾಗಿದೆ.

ಗುಲಬರ್ಗಾ ಜಿಲ್ಲೆ ಒಟ್ಟು ಜನಸಂಖ್ಯೆ ೨೫.೬೪.೮೯೨ ಆಗಿದೆ. ಇದರಲ್ಲಿ ೧೩,೦೭,೦೬೧ ಪುರುಷರು ಮತ್ತು ೧೨,೫೭,೮೩೧ ಮಹಿಳೆಯರು ಇದ್ದಾರೆ. ಒಟ್ಟು ಜನಸಂಖ್ಯೆಯಲ್ಲಿ ೪.೨೦ ಸ್ಥಾನವನ್ನು ಇದು ಹೊಂದಿದೆ. ಈ ಜಿಲ್ಲೆಯ ಸಾಕ್ಷರತೆ ಪ್ರಮಾಣ ಶೇಕಡಾ ೬೫.೬೫ರಷ್ಟಿದೆ. ಇದರಲ್ಲಿ ಪುರುಷರು ೫೫.೮೭ ಮಹಿಳೆಯರು ಇದ್ದಾರೆ(ಜನಗಣತಿ ವರದಿ ೨೦೧೧: ೪೯).

**ನದಿಗಳು**

ಬೆಣ್ಣೆತೊರೆ ನದಿ ಮತ್ತು ಭೀಮಾನದಿಗಳು ಗುಲಬರ್ಗಾದ ಜನತೆಗೆ ವರಪ್ರಸಾದವಾಗಿವೆ. ಏಕೆಂದರೆ ಈ ನದಿಗಳಿಂದ ರೈತರು ತಮ್ಮ ಬವಣೆಯನ್ನು ಸ್ವಲ್ಪಮಟ್ಟಿಗೆ ಈಡೇರಿಸಿಕೊಂಡಿದ್ದಾರೆ. ಬೆಣ್ಣೆತೊರೆ ನದಿ ಮಹಾರಾಷ್ಟ್ರದ ಮಲೆಗಾಂವ್ ಗ್ರಾಮದ ಬಳಿ ಹುಟ್ಟಿ ಆಳಂದ ತಾಲೂಕಿನ ಮೂಲಕ ಗುಲಬರ್ಗಾ ಪ್ರವೇಶಿಸುವ ಇದು ಆಳಂದ, ಗುಲಬರ್ಗಾ ಮತ್ತು ಚಿತ್ತಾಪುರ ತಾಲೂಕುಗಳಲ್ಲಿ ಸುಮಾರು ೧೦೦ ಕಿ.ಮೀ. ದೂರ ಹರಿಯುತ್ತದೆ. ಭೀಮಾನದಿಯು ಮಹಾರಾಷ್ಟ್ರದ ಪಶ್ಚಿಮಘಟ್ಟಗಳ ಭೀಮಾಶಂಕರದಲ್ಲಿ ಉಗಮಿಸುತ್ತದೆ. ಬಿಜಾಪುರದಿಂದ ಹರಿದು ಬಂದು ಸಿಂದಗಿ ಮೂಲಕ ಗುಲಬರ್ಗಾವನ್ನು ಪ್ರವೇಶಿಸುತ್ತದೆ(ಪಾಟೀಲ ೧೯೯೭: ೨೧-೨೩).

**ಬೆಳೆಗಳು**

ತೊಗರಿಬೆಳೆಯ ಕಣಜ ಎಂದೇ ಪ್ರಸಿದ್ಧವಾಗಿರುವ ಗುಲಬರ್ಗಾ ಜಿಲ್ಲೆಯು ತೊಗರಿಬೆಳೆಯಲ್ಲಿ ಇಡೀ ರಾಜ್ಯದಲ್ಲಿ ಅಷ್ಟೇ ಅಲ್ಲದೆ ದೇಶ ಮತ್ತು ಏಷ್ಯಾಖಂಡದಲ್ಲಿ ತನ್ನ ಸ್ಥಾನವನ್ನು ಗುರುತಿಸಿಕೊಂಡಿದೆ. ಗುಲಬರ್ಗಾ ಜಿಲ್ಲೆಯ ಆಳಂದ, ಚಿತ್ತಾಪುರ, ಸೇಡಂ, ಗುಲಬರ್ಗಾ, ಚಿಂಚೋಳಿ, ಜೇವರ್ಗಿ, ಅಫಜಲಪುರ ತಾಲೂಕುಗಳಲ್ಲಿ ಅಧಿಕ ಕ್ಷೇತ್ರದಲ್ಲಿ ತೊಗರಿ ಬೆಳೆಯಲಾಗುತ್ತದೆ. ಇದಷ್ಟೇ ಅಲ್ಲದೆ ಸಜ್ಜೆ ಬೆಳೆಯಲ್ಲಿ ಗುಲಬರ್ಗಾ ಜಿಲ್ಲೆಯು ರಾಜ್ಯದಲ್ಲಿ ೨ನೇ ದೊಡ್ಡ ಜಿಲ್ಲೆಯಾಗಿದೆ. ಸು. ೫೯೦೦೦ ಹೆಕ್ಟೇರ್ ಭೂಮಿಯಲ್ಲಿ ಸಾಗುವಳಿ ಮಾಡಲಾಗುತ್ತಿದೆ. ಜೋಳವನ್ನು ಬಿಜಾಪುರ ಬಿಟ್ಟರೆ ಗುಲಬರ್ಗಾದ ಪರಿಸರದಲ್ಲಿ ಅತಿ ಹೆಚ್ಚು ಬೆಳೆಯಲಾಗುತ್ತದೆ. ಈ ಜಿಲ್ಲೆಯ ಆಳಂದ, ಜೇವರ್ಗಿ, ಗುಲಬರ್ಗಾ ತಾಲೂಕುಗಳಲ್ಲಿ ಹೆಚ್ಚಿನ ಪ್ರದೇಶದಲ್ಲಿ ಜೋಳವನ್ನು ಬೆಳೆಯಲಾಗುತ್ತದೆ. ಇವುಗಳಷ್ಟೇ ಅಲ್ಲದೆ ಗೋಧಿ, ಕಡಲೆ, ಮೆಣಸಿನಕಾಯಿ, ಶೇಂಗಾ, ಸೂರ್ಯಕಾಂತಿ ಬೆಳೆಗಳನ್ನು ಬೆಳೆಯಲಾಗುತ್ತಿದೆ. (ಪಾಟೀಲ ೧೯೯೭: ೧೯೭).

ಗುಲಬರ್ಗಾ ತಾಲೂಕಿನಲ್ಲಿ ವ್ಯವಸಾಯದ ಜೊತೆಗೆ ಮೀನುಗಾರಿಕೆ, ಪಶುಪಾಲನೆ, ಕೋಳಿಸಾಕಾಣಿಕೆ, ಗುಡಿಕೈಗಾರಿಕೆಗಳು ಕೂಡ ಹೇರಳವಾಗಿ ಕಂಡುಬರುತ್ತವೆ. ಈ ಪರಿಸರದಲ್ಲಿ ಶರಣಬಸವೇಶ್ವರರ ಕೆರೆಯಲ್ಲಿ ಮೀನುಗಾರಿಕೆಯು ಬಹಳ ಹೇರಳವಾಗಿ ಕಂಡುಬರುತ್ತದೆ. ಅಂದರೆ ಮೀನುಗಾರರು ಇಲ್ಲಿನ ಮೀನನ್ನು ಹಿಡಿದು ಅದನ್ನು ಮಾರಾಟ ಮಾಡುವ ಮೂಲಕ ತಮ್ಮ ಜೀವನವನ್ನು ಸಾಗಿಸುತ್ತಾರೆ.

**ಖನಿಜ ಸಂಪತ್ತು**

ಗುಲಬರ್ಗಾವು ಸುಣ್ಣಶಿಲೆಯಲ್ಲಿ ಕರ್ನಾಟಕದಲ್ಲಿ ತನ್ನದೇ ಆದ ಸ್ಥಾನವನ್ನು ಪಡೆದುಕೊಂಡಿದೆ. ಈ ಶಿಲೆಯಿಂದ ಸಿಮೆಂಟನ್ನು ತಯಾರಿಸುತ್ತಾರೆ. ಸಿಮೆಂಟ್ ತಯಾರಿಕೆಗೆ ಅಗತ್ಯವಾದ ಮೂಲವಸ್ತುಗಳು ಸುಣ್ಣಶಿಲೆ

ಮತ್ತು ಜೇಡು. ಸುಣ್ಣ ಸಿಮೆಂಟ್, ಕ್ಯಾಲ್ಸಿಯಂ, ಕಾರ್ಬೈಡ್‌ಗಳ ಉತ್ಪಾದನೆಯಲ್ಲಿ ಸುಣ್ಣದ ಕಲ್ಲನ್ನು ಪ್ರಮುಖವಾಗಿ ಉಪಯೋಗಿಸಲಾಗುತ್ತದೆ. ಗುಲಬರ್ಗಾ ಪರಿಸರದಲ್ಲಿ ಭೀಮಾ ಶಿಲಾಸರಣಿಯಲ್ಲಿ ಅಧಿಕ ಪ್ರಮಾಣದ ಸುಣ್ಣದ ಕಲ್ಲು ನಿಕ್ಷೇಪಗಳು ಪತ್ತೆಯಾಗಿವೆ.

ಜಿಲ್ಲೆಯ ಜೇವರ್ಗಿ, ಚಿತ್ತಾಪುರ, ಚಿಂಚೋಳಿ, ಸೇಡಂ, ಗುಲಬರ್ಗಾ, ಸುರಪುರ ಮತ್ತು ಶಹಾಪುರ ಪರಿಸರದಲ್ಲಿ ಸುಮಾರು ೧,೫೦೦ ಚ.ಮೈ. ಪ್ರದೇಶದಲ್ಲಿ ಸುಣ್ಣಶಿಲೆಗಳ ನಿಕ್ಷೇಪಗಳು ಹೇರಳವಾಗಿವೆ. ಇಲ್ಲಿರುವ ನಿಕ್ಷೇಪಗಳು ೧೫-೧೬ ಸೆ.ಮೀ. ದಪ್ಪದ ನಿಕ್ಷೇಪಗಳಾಗಿದ್ದು ಇವುಗಳಲ್ಲಿ ೧,೨೮,೭೦೦ ಮಿಲಿಯನ್ ಟನ್ ಸುಣ್ಣದ ಕಲ್ಲಿನ ನಿಕ್ಷೇಪವಿದೆಯೆಂದು ಅಂದಾಜು ಮಾಡಲಾಗಿದೆ. ಇದಷ್ಟೇ ಅಲ್ಲದೆ ಜಿಪ್ಸಮ್ ರಾಸಾಯನಿಕ ಗೊಬ್ಬರ, ಸಿಮೆಂಟ್ ತಯಾರಿಕೆ ಮತ್ತು ಪ್ಲಾಸ್ಟರ್ ಕೈಗಾರಿಕೆಯಲ್ಲಿ ಜಿಪ್ಸಮ್ ಮುಖ್ಯವಾಗಿ ಉಪಯೋಗಿಸುತ್ತಾರೆ. ಜಿಪ್ಸಂ ಗುಲಬರ್ಗಾ ಜಿಲ್ಲೆಯ ಗುಂಡಗುರ್ತಿ ಪೇಠ ಶಿರೂರು ಮತ್ತು ಮರತೂರಗಳಲ್ಲಿ ದೊರೆಯುತ್ತದೆ. ಹೀಗೆ ಗುಲಬರ್ಗಾ ತಾಲೂಕು ಖನಿಜ ಸಂಪತ್ತಿನಲ್ಲಿ ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ(ಪಾಟೀಲ ೧೯೯೭:೧೮).

### ೧.೪. ಐತಿಹಾಸಿಕ ಹಿನ್ನೆಲೆ

ಕರ್ನಾಟಕ ಚರಿತ್ರೆಯುದ್ದಕ್ಕೂ ಪ್ರಮುಖ ಪಾತ್ರ ವಹಿಸಿರುವ ಗುಲಬರ್ಗಾ ಜಿಲ್ಲೆಯು ಮೌರ್ಯರು, ಶಾತವಾಹನರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಳಚೂರಿಗಳು, ಬಹಮನಿ ಮತ್ತು ಬಿಜಾಪುರದ ಆದಿಲ್‌ಶಾಹಿಗಳು ಸತತವಾಗಿ ಆಳ್ವಿಕೆ ಮಾಡಿದ್ದಾರೆ. ರಾಷ್ಟ್ರಕೂಟರು ಗುಲಬರ್ಗಾ ಸಮೀಪದಲ್ಲಿರುವ ಮಳಖೇಡವನ್ನು ತಮ್ಮ ರಾಜಧಾನಿಯಾಗಿ ಮಾಡಿಕೊಂಡಿದ್ದರು. ಅನಂತರ ಕರ್ನಾಟಕವನ್ನು ಆಳಿದ ಚಾಲುಕ್ಯ ಮೂರನೇ ಸೋಮೇಶ್ವರನು ಆಗ ಇದೇ ಪ್ರಾದೇಶಿಕ ವ್ಯಾಪ್ತಿಯಲ್ಲಿದ್ದ ಕಲ್ಯಾಣವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಬಹಮನಿಗಳ ಆಳ್ವಿಕೆಯ ಸಂಸ್ಥಾಪಕನಾದ ಅಲ್ಲಾವುದ್ದೀನ್ ಬಹಮನಿ ಷಾ ಗುಲಬರ್ಗಾ ನಗರವನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಈ ಸಾಮ್ರಾಜ್ಯವು ದಖ್ಖನ್ ಪ್ರಸ್ಥಭೂಮಿಯ ಕೃಷ್ಣಾನದಿಯಿಂದ ತಪತಿ ನದಿಯವರೆಗೂ ವ್ಯಾಪಿಸಿತ್ತು. ಸಾಮ್ರಾಜ್ಯ ದೀರ್ಘ ಆಳ್ವಿಕೆಯ ಅವಧಿಯಲ್ಲಿ ಅವರು ಮಾಡಿದ ಸಾಂಸ್ಕೃತಿಕ ಸಾಧನೆಗಳು ಚರಿತ್ರೆಯಲ್ಲಿ ಅವಿಸ್ಮರಣೀಯವಾಗಿದೆ. ಬಹಮನಿ ಷಾಹಿಗಳ ಆಳ್ವಿಕೆ ಅವನತಿಗೊಂಡ ಮೇಲೆ ಈ ಭಾಗವು ಹೈದರಾಬಾದ್ ನಿಜಾಮರ ಸಂಸ್ಥಾನವಾಗಿ ಮುಂದುವರಿದು, ನಂತರ ಅಪರೋಕ್ಷವಾಗಿ ಬ್ರಿಟಿಶರ ಹತೋಟಿಯಲ್ಲಿ ಮುಂದುವರೆಯಿತು. ಪ್ರಾದೇಶಿಕವಾಗಿ ಇದರ ಚರಿತ್ರೆಯು ಬಹಳಷ್ಟು ಮಹತ್ವದಿಂದ ಕೂಡಿದೆ.

### ಪೌರಾಣಿಕ ಹಿನ್ನೆಲೆ

ಪುರಾಣ ಕಥೆಗಳಲ್ಲಿ ಈ ಪ್ರದೇಶದ ಚರಿತ್ರೆಯನ್ನು ಕಾಣುತ್ತೇವೆ. ಈ ಹಿನ್ನೆಲೆಯುಳ್ಳ ಅನೇಕ ಸ್ಥಳಗಳಿದ್ದು ಕೆಲವು ಪವಿತ್ರ ಕ್ಷೇತ್ರಗಳೆಂದು ಜನಪ್ರಿಯವಾಗಿವೆ. ಶಹಾಪೂರ, ಸುರಪುರ ಹಾಗೂ ಜೇವರ್ಗಿ ತಾಲೂಕುಗಳ ಗಡಿಯಂತಿರುವ ಕೃಷ್ಣಾ-ಭೀಮೆಯರ ನಡುವೆ ವ್ಯಾಪಿಸಿರುವ ಪ್ರದೇಶವು ಹಲವಾರು ರೀತಿಯ ಪೌರಾಣಿಕ ಕಥೆಯನ್ನು

ಹೊಂದಿದ. ವಿಜಾಪುರ ಜಿಲ್ಲೆಯ ಮುದ್ದೇಬಿಹಾಳ ಹಾಗೂ ಸಿಂಧಗಿ ತಾಲೂಕಿನವರೆಗಿನ ವ್ಯಾಪ್ತಿಯುಳ್ಳ ಭಾಗವನ್ನು "ಸಗರನಾಡು" ಎಂದು ಕರೆಯಲಾಗುತ್ತದೆ. ಈ ಪ್ರದೇಶವನ್ನು ಸಗರ ಚಕ್ರವರ್ತಿ ಸಗರನಾಡನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನೆಂದು ಪ್ರತೀತಿ ಇದೆ. ಪೌರಾಣಿಕ ಕಥೆಯ ಪ್ರಕಾರ ಯುದ್ಧದಲ್ಲಿ ಬಾಹುಕನು ಮರಣ ಹೊಂದಿದನು. ಅನಂತರ ಅವನ ಪತ್ನಿಯು ಓರ್ವ ಮಹರ್ಷಿಯ ಸಂಬಂಧದಿಂದ ಗರ್ಭವತಿಯಾದಳು. ಆಕೆಯ ಸವತಿಯರು ಅಸೂಯೆಯಿಂದ ಆಕೆಗೆ ತಿಳಿಯದ ಹಾಗೆ ಅನ್ನದಲ್ಲಿ ವಿಷ ಉಣಿಸಿ ಭ್ರೂಣವನ್ನು ನಾಶ ಮಾಡಲು ಪ್ರಯತ್ನಿಸಿದರೂ, ಗರ್ಭದ ಮೇಲೆ ವಿಷವು ಯಾವ ಪ್ರಭಾವ ಬೀರದೆ ಅದನ್ನು ಮೈತಳೆದು ಜನಿಸಿದ ಮಗುವೇ "ಸಗರ"ನೆಂಬ ಹೆಸರನ್ನು ಗಳಿಸಿದನು. ಈತನೇ ಮುಂದೆ ಯಶಸ್ವೀ ಸಾಮ್ರಾಟನಾಗಿ "ಸಗರ ಚಕ್ರವರ್ತಿ" ಎನಿಸಿಕೊಂಡನು(ಪಾಟೀಲ ೧೯೯೭: ೩೪). ಹೀಗೆ ಈ ಪ್ರದೇಶದಲ್ಲಿ ಇಂಥ ಪೌರಾಣಿಕ ಕಥೆಗಳು ಕಂಡುಬರುತ್ತವೆ.

**ಇತಿಹಾಸಪೂರ್ವ ಕಾಲ**

ಲಿಖಿತ ದಾಖಲೆಗಳು ದೊರೆಯದೆ ಇರುವ ಕಾಲದ ಇತಿಹಾಸವನ್ನು ಇತಿಹಾಸಪೂರ್ವ ಕಾಲ ಅಥವಾ ಪ್ರಾಗೈತಿಹಾಸಿಕ ಕಾಲ(ಪ್ರೀ-ಹಿಸ್ಟಾರಿಕಲ್ ಪಿರಿಯಡ್) ಎನ್ನುತ್ತಾರೆ. ವಾಸದ ನಿವೇಶನಗಳು, ಮಡಕೆ, ಕುಡಿಕೆಗಳು, ಎಲುಬುಗಳು, ಕಲ್ಲಿನ ಆಯುಧಗಳು ಮುಂತಾದ ಅವಶೇಷಗಳ ನೆರವಿನಿಂದಷ್ಟೇ ಈ ಕಾಲದ ಇತಿಹಾಸ ರಚನೆ ಆಗಿರಬೇಕು ಗುಲಬರ್ಗಾ ಜಿಲ್ಲೆಯ ಹುಣಸಿಗಿಯಲ್ಲಿ ಆದಿಶಿಲಾಯುಗದ ಕೆಲವು ಹೆಚ್ಚಿನವು ಕೊಡಲಿಗಳು ಮತ್ತು ಸೀಳು ಸಾಧನಗಳು. ಆದರೆ ಅವು ಚಪ್ಪಟೆಯಾಗಿರದೆ ಉಂಡೆಕಲ್ಲಿನಂತಿವೆ (ಕಾಮತ್ ೧೯೭೩: ೧೩). ಗುಲಬರ್ಗಾ ಜಿಲ್ಲೆಯು ನೈಸರ್ಗಿಕವಾಗಿ ಸಂಪದ್ಭರಿತವಾಗಿದೆ. ಇಲ್ಲಿ ಭೀಮಾ ನದಿಯು ವಾಯವ್ಯ ಆಗ್ನೇಯ ದಿಕ್ಕಿನಲ್ಲಿ ಹರಿಯುತ್ತಿದೆ. ಇಲ್ಲಿ ೧೯ನೇ ಶತಮಾನದ ಉತ್ತರಾರ್ಧ ದಶಕಗಳಲ್ಲಿ ರಾಬರ್ಟ್ ಬ್ರೂಸ್‌ಫೂಟ್ ಎಂಬ ಭೂವಿಜ್ಞಾನಿಯು ಸುರಪುರ ತಾಲೂಕಿನ ಕೃಷ್ಣಾ ನದಿಯ ದಂಡೆಯ ಮೇಲೆ ಇರುವ ಯಡಹಳ್ಳಿಯಲ್ಲಿ ಆದಿ ಶಿಲಾಯುಗದ ಕಲ್ಲಿನ ಕೊಡಲಿಗಳನ್ನು ಪತ್ತೆ ಹಚ್ಚಿದನು. ಹುಣಸಿಗಿಯಲ್ಲಿ ಆದಿ, ಹಳೇ ಶಿಲಾಯುಗದ ಐದು ನೆಲೆಗಳು ಈವರೆಗೆ ಪತ್ತೆಯಾಗಿವೆ. ಹುಣಸಿಗಿಯಲ್ಲಿಯ ನೆಲೆಗಳು ಎಲ್ಲವೂ ಮೂಲನೆಲೆಗಳಾಗಿವೆ. ಆದ್ದರಿಂದ ಇಡೀ ಭಾರತದಲ್ಲಿರುವ ಇಂಥ ಕೆಲವೇ ನೆಲೆಗಳಲ್ಲಿ ಇವು ಅತ್ಯಂತ ಮಹತ್ವದ್ದಾಗಿವೆ(ಪಾಟೀಲ ೧೯೯೭: ೩೫). ಈ ಪ್ರದೇಶದಲ್ಲಿ ದೊರೆತ ಪ್ರಾಣಿಗಳ ಎಲುಬು ಪಳೆಯುಳಿಕೆಗಳು ದೊರೆತಿವೆ. ಕೃಷ್ಣಾನದಿ ಬಳಿಯ, ಮಳಖೇಡ ಹಾಗೂ ಇತರ ನೆಲೆಗಳಲ್ಲಿ ಮಧ್ಯಹಳೇ ಶಿಲಾಯುಗದ ಜನರ ಕಲ್ಲಿನ ನಿವೇಶನಗಳ ಉತ್ಖನನಗಳಿಂದ ನೂತನ ಕೊಡೇಕಲ್ ಮತ್ತು ಬೂದಿಹಾಳ ನಿವೇಶನಗಳ ಉತ್ಖನನಗಳಿಂದ ನೂತನ ಶಿಲಾಯುಗದ ಜೀವನ ಶೈಲಿಯ ಬಗೆಗೆ ಕೆಲವೊಂದು ಸಾಮಾನ್ಯ ಅಂಶಗಳು ತಿಳಿಯುತ್ತವೆ. ಜೇವರ್ಗಿ, ಆಂದೋಲ, ರಾಜನಕೋಳರೂ,.ಹಗರಟಗಿಯಲ್ಲಿ ಕಬ್ಬಿಣ ಯುಗದ ಬೃಹತ್ ಶಿಲಾ ಸಂಸ್ಕೃತಿಯ ಕೆಲವೊಂದು ಕಲ್ಗೋರಿಗಳನ್ನು ಮೆಡೋಸ್ ಟೇಲರ್ ಬೆಳಕಿಗೆ ತಂದಿದ್ದಾನೆ. ಇಂಥ ಕಲ್ಗೋರಿಗಳ ನೆಲೆಗಳು ದಕ್ಷಿಣ ಭಾರತದಲ್ಲೆಲ್ಲಾ ೨೦೦೦ಕ್ಕೂ ಹೆಚ್ಚು ಸಂಶೋಧನೆಯಾಗಿವೆ. ಬಲ್ಲೆ, ಕತ್ತಿ, ತ್ರಿಶೂಲ, ಕಬ್ಬಿಣ ನಾಲಗೆಯುಳ್ಳ ಕಂಚಿನ ಸಣ್ಣ ಸಣ್ಣ ಗಂಟೆಗಳು, ಹಿಡಿಕೆಯುಳ್ಳ ಬಾದಾಮಿ ಆಕಾರದ ಹಣತೆಗಳು, ತಟ್ಟೆಗಳು ಮೊದಲಾದ ಅವಶೇಷಗಳು ದೊರೆತಿವೆ. ಗುಲಬರ್ಗಾ

ಜಿಲ್ಲೆಯ ಬಳಿಚಕ್ರ ಗ್ರಾಮ ಎಂಬಲ್ಲಿ ಕುದುರೆ ಸವಾರನ ಚಿತ್ರವಿದೆ. ಈ ಚಿತ್ರಗಳ ಸಮೀಪದಲ್ಲಿ ನೂರಾರು ಗೋರಿಗಳಿವೆ ಮತ್ತು ವಸತಿ ನೆಲೆಯು ಇದೆ. ವಿಶಿಷ್ಟತೆಯೆಂದರೆ ಇವರು ಶವ ಸಂಸ್ಕಾರಕ್ಕೋಸ್ಕರ ಕೋಣೆ ಗೋರಿಗಳನ್ನು ನಿರ್ಮಿಸುತ್ತಿದ್ದರು (ತೆಲಗಾವಿ ೨೦೦೪: ೧೦).

**ಮೌರ್ಯ ಮತ್ತು ಶಾತವಾಹನ ಸಾಮ್ರಾಜ್ಯದ ಇತಿಹಾಸ**

ಮೌರ್ಯರು ಗುಲಬರ್ಗಾದಲ್ಲಿ ಆಳ್ವಿಕೆ ಮಾಡಿದ್ದು, ಸನ್ನತಿಯಲ್ಲಿ ಅಶೋಕನ ಸಾಮ್ರಾಜ್ಯದ ಕುರುಹುಗಳಿವೆ. ಇದು ದಕ್ಷಿಣ ಭಾಗದಲ್ಲಿ ಒಂದು ಪ್ರಮುಖ ಪಟ್ಟಣವಾಗಿದ್ದಿತ್ತೆಂಬುದರಲ್ಲಿ ಸಂಶಯವಿಲ್ಲ. ಅಷ್ಟೇ ಅಲ್ಲ, ಪ್ರಮುಖ ಆಡಳಿತ ಕೇಂದ್ರವೂ ಆಗಿದ್ದಿರಬೇಕು. ಆದ್ದರಿಂದ ಸನ್ನತಿಯಲ್ಲಿ ದೊರೆತ ಮೌರ್ಯರ ಕಾಲದ ಪ್ರಮಾಣಗಳು ಅತ್ಯಂತ ಮಹತ್ವದ್ದು, ಪ್ರಾಯಶಃ ಸನ್ನತಿಯನ್ನು ಮೌರ್ಯ ಸಾಮ್ರಾಜ್ಯದ ಒಬ್ಬ ಉನ್ನತ ಆಡಳಿತಾಧಿಕಾರಿ ಇದ್ದಿರಬೇಕೆಂದು ಕಾಣುತ್ತದೆ. ಆ ಕಾಲದಿಂದಲೂ ಈ ಪ್ರದೇಶದಲ್ಲಿ ಬೌದ್ಧ ಧರ್ಮ ಪ್ರಚಾರವಾಗಿದ್ದಿರಬಹುದು. ಇಂಥ ಅಂಶಗಳಿಂದ ನೋಡಿದಾಗ ಇಲ್ಲಿ ಮೌರ್ಯರರ ಆಳ್ವಿಕೆಗೆ ಗುಲಬರ್ಗಾದ ಪ್ರದೇಶಗಳನ್ನು ಒಳಗೊಂಡಿವೆ ಎಂದು ಹೇಳಬಹುದು.

ಶುಂಗರ ಮತ್ತು ಕಣ್ವರ ರಾಜ್ಯಭಾರವನ್ನು ಮುಕ್ತಾಯಗೊಳಿಸಿದ ದಕ್ಷಿಣ ಆಂಧ್ರದ ಅರಸನೊಬ್ಬನೆಂದು ಪುರಾಣಗಳು ಹೇಳುತ್ತವೆ. ಗೋದಾವರಿ ಮತ್ತು ಕೃಷ್ಣಾ ನದಿಗಳ ಮುಖಜ ಭೂಮಿಯ ಪ್ರದೇಶದಲ್ಲಿರುವ ತೆಲುಗು ಭಾಷೆಯನ್ನಾಡುವ ಜನರಿಗೆ ಆಂಧ್ರರು ಎಂಬ ಹೆಸರು ರೂಢಿಯಲ್ಲಿದೆ. ಸಮಕಾಲೀನ ಶಾಸನಗಳಲ್ಲಿ ಈ ಅರಸನ ಸಂತತಿಯವರನ್ನು ಶಾತವಾಹನರೆಂದು ಕರೆಯಲಾಗಿದೆ(ಶಾರದ ೨೦೦೩: ೯೪).

ಇದಲ್ಲದೇ ಶಾತವಾಹನರ ಆಳ್ವಿಕೆಯನ್ನು ಗುಲಬರ್ಗಾ ಪ್ರದೇಶವು ಹೊಂದಿತ್ತು ಎಂಬುದಕ್ಕೆ ಅನೇಕ ಸಂಶೋಧನೆಗಳು ನಡೆದು ಆಧಾರಗಳು ದೊರಕಿವೆ. ೧೯೯೦ನೇ ವರ್ಷದಲ್ಲಿ ಗುಲಬರ್ಗಾ ಜಿಲ್ಲೆಯ ಚರಿತ್ರೆಯ ಸಂಶೋಧನೆಯಲ್ಲಿ ಇವರ ಕಾಲದ ಬೌದ್ಧಸ್ತೂಪ, ಶಿಲ್ಪ ಹಾಗೂ ಶಾಸನಗಳು ದೊರಕಿವೆ. ಹಾಗೆಯೇ ಇಟ್ಟಿಗೆಯ ರಕ್ಷಣಾ ಕೋಟೆ ಇದರೊಳಗೆ ನಗರವಿದ್ದ ಕುರುಹುಗಳಿವೆ. ಈ ರಕ್ಷಣಾ ಗೋಡೆಯು ಹೊರಗೆ ಬೌದ್ಧಸ್ತೂಪಗಳಿದ್ದವು. ಹಾಗೆಯೇ ತಾಮ್ರದ ನಾಣ್ಯಗಳು, ಅಲ್ಪಸ್ವಲ್ಪ ಮಡಕೆಚೂರುಗಳು ದೊರಕಿವೆ. ಈಗಿನ ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ಹಸರಗುಂಡಗಿ, ಮುಂತಾದ ಸ್ಥಳಗಳಲ್ಲಿ ಶಾಸನಸಹಿತ ಸ್ಮಾರಕಗಳು ಶೋಧವಾಗಿವೆ. ನಾಲ್ಕು ಶಾಸನಗಳು ನೇರವಾಗಿ ಶಾತವಾಹನರಿಗೆ ಸಂಬಂಧಿಸಿದ್ದು ಪ್ರಸಿದ್ಧವಾದ ಗೌತಮಿಪುತ್ರ ಶಾತಕರ್ಣಿ ಮತ್ತು ವಸಿಷ್ಠಪುತ್ರ ಪುಳಮಾವಿ ಇವರನ್ನು ಉಲ್ಲೇಖಿಸುತ್ತವೆ. ಈ ಪ್ರದೇಶವು ಇವರ ಆಡಳಿತಕ್ಕೆ ಒಳಪಟ್ಟಿತ್ತೆಂದು ಕಾಣುತ್ತದೆ(ತೆಲಗಾವಿ ೨೦೦೪: ೯೨).

ಇಡೀ ಕರ್ನಾಟಕದಲ್ಲಿಯೇ ಶಾತವಾಹನ ಕಲೆ ಅದರಲ್ಲೂ ವಿಶೇಷವಾಗಿ ಬೌದ್ಧ ಪಂಥ ಕಲೆಗೆ ಅತಿ ಮಹತ್ವದ ಏಕೈಕ ಸ್ಥಳವೆಂದರೆ ಗುಲಬರ್ಗಾ ಪ್ರದೇಶದ ಸನ್ನತಿ(ಪಾಟೀಲ ೧೯೯೭: ೪೩). ದಖ್ಖನಿನಲ್ಲಿ ಶಾತವಾಹನ ಆಳ್ವಿಕೆಯು ಸ್ವಲ್ಪ ಹೆಚ್ಚು ಕಡಿಮೆ ಎರಡನೆಯ ಶತಮಾನ ಕೊನೆ ಅಥವಾ ಮೂರನೆಯ ಶತಮಾನದ ಆರಂಭದಲ್ಲಿ ಕೊನೆಗೊಂಡಿತು. ಅನಂತರ ಶಾತವಾಹನ ಮಾಂಡಲಿಕರಾದ ಮಹಾರಥಿಗಳು ಗುಲಬರ್ಗಾ ಪ್ರದೇಶವನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡು ಕೆಲವು ವರ್ಷ ರಾಜ್ಯಭಾರ ಮಾಡಿ ಪತನ ಹೊಂದಿದ್ದು ದಾಖಲೆಗಳಿಂದ ದೃಢಪಟ್ಟಿದೆ.

## ಬಾದಾಮಿ ಚಾಲುಕ್ಯರ ಇತಿಹಾಸ

ಕರ್ನಾಟಕವನ್ನು ಆಳಿದ ಪ್ರಮುಖ ಅರಸುಮನೆತನಗಳಲ್ಲಿ ಬಾದಾಮಿ ಚಾಲುಕ್ಯರ ಮನೆತನವು ಸಹ ಪ್ರಮುಖವಾಗಿದೆ. ಪ್ರಸಿದ್ಧವಾದ ಚಾಲುಕ್ಯರು ಕದಂಬ ರಾಜ್ಯದ ಪತನವಾದ ಮೇಲೆ ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು. ಇವರು ಕ್ರಿ.ಶ ೫೪೦ರಿಂದ ೭೫೩ರವರೆಗೆ ಸುಮಾರು ೨೫೦ ವರ್ಷಗಳವರೆಗೆ ಕರ್ನಾಟಕವನ್ನು ಆಳ್ವಿಕೆ ಮಾಡಿದರು. ಈ ಸಾಮ್ರಾಜ್ಯವು ಕರ್ನಾಟಕದಲ್ಲಿ ಅಷ್ಟೇ ಅಲ್ಲದೆ ದಕ್ಷಿಣ ಭಾರತದ ಚರಿತ್ರೆಯಲ್ಲಿ ವಿಶೇಷತೆಯಿಂದ ಕೂಡಿದೆ. ಬಾದಾಮಿ ಚಾಲುಕ್ಯರ ಸಾಮ್ರಾಜ್ಯವು ಉತ್ತರದಲ್ಲಿ ನರ್ಮದಾ ನದಿ ತೀರದಿಂದ ದಕ್ಷಿಣದ ತುಂಗಭದ್ರ ನದಿಯವರೆಗೂ ಹರಡಿತು. ವಾತಾಪಿ ಅಥವಾ ಬಾದಾಮಿಯನ್ನು ರಾಜಧಾನಿಯನ್ನಾಗಿ ಹೊಂದಿದ್ದ ಚಾಲುಕ್ಯರ ಮೂಲದ ಬಗ್ಗೆ ಶಾಸನಗಳು ದೊರೆತಿಲ್ಲ. ಆದರೆ ವೆಂಗಿಯ ಪೂರ್ವ ಚಾಲುಕ್ಯರು ಹಾಗೂ ಕಲ್ಯಾಣದ ಚಾಲುಕ್ಯರ ಶಾಸನಗಳಲ್ಲಿ ಕೆಲವು ಕತೆಗಳು ಕಂಡುಬರುತ್ತವೆ. ಕಲ್ಯಾಣದ ಚಾಲುಕ್ಯರ ಶಾಸನಗಳಲ್ಲಿ ಈ ಹೆಸರಿಗೆ ಸಂಬಂಧಿಸಿದಂತೆ ಶಾಸನಗಳಲ್ಲಿ ಚಾಲುಕ್ಯ, ಚಲಿಕ, ಚಾಲಿಕ್ಯ ಮೊದಲಾದ ಪದಗಳು ಕಂಡುಬರುತ್ತವೆ.

ಬಿಲ್ಹಣನ ವಿಕ್ರಮಾಂಕದೇವ ಚರಿತಂ ಎಂಬ ಕೃತಿಯಿಂದ ತಿಳಿಯುವಂತೆ, "ಚಾಲುಕ್ಯ" ಎಂಬ ಹೆಸರು ಬಂದದ್ದು "ಚಲುಕ" ಎಂಬುದರಿಂದ. ಅದಕ್ಕೆ ಅಂಗೈಯ ಹಳ್ಳಿ ಎಂದು ಅರ್ಥ. ಸಂಧ್ಯೋಪಾಸನೆ ಮಾಡುತ್ತಿದ್ದಾಗ, ಭೂಮಿಯಲ್ಲಿ ಒಂದೇ ಸಮನೆ ಕೆಡುಕು ಹೆಚ್ಚುತ್ತಿರುವುದರಿಂದ ಅದನ್ನು ಕೊನೆಗೊಳಿಸಲು ಒಬ್ಬ ವೀರನನ್ನು ಅನುಗ್ರಹಿಸಬೇಕೆಂದು ಇಂದ್ರ, ಬ್ರಹ್ಮನನ್ನು ಕೋರಿದನು. ಬ್ರಹ್ಮನು ತನ್ನ ಚಲುಕ ಎಂದರೆ ಅಂಗೈಯನ್ನು ನೋಡಿದನು. ಅಲ್ಲಿಂದ ಒಬ್ಬ ಮಹಾಪರಾಕ್ರಮಿ ಚಾಲುಕ್ಯನು ಹುಟ್ಟಿ ಬಂದನು. ಅವನೇ ಚಾಲುಕ್ಯ ಮೂಲಪುರುಷ (ಷೇಕ್ ಅಲಿ ೧೯೯೭: ೪೩೫).

ಬಾದಾಮಿ ಚಾಲುಕ್ಯರ ಆಳ್ವಿಕೆಯಲ್ಲಿ ಗುಲಬರ್ಗಾವು ಅಪರೋಕ್ಷವಾಗಿ ಆಡಳಿತಕ್ಕೆ ಒಳಪಟ್ಟಿತು. ಗುಲಬರ್ಗಾ ತಾಲೂಕಿನ ನಿಂಬರಗಿಯ ೧೧೩೪ರ ಶಾಸನವು ಕಲ್ಯಾಣದ ಚಾಲುಕ್ಯ ಅರಸ ಮುಮ್ಮಡಿ ಸೋಮೇಶ್ವರನ ಕಾಲಕ್ಕೆ ಸೇರಿದ್ದು, ಬಾದಾಮಿ ಚಾಲುಕ್ಯ ಅರಸನಾದ ವಿನಯಾದಿತ್ಯನಿಂದ ನಿಂಬರಗಿ ಗ್ರಾಮವನ್ನು ಊರೊಡೆಯ ಕಲಿದೇವನ ಪೂರ್ವಜನಾದ ನಾರಾಯಣಾಚಾರ್ಯನು ದತ್ತಿಯಾಗಿ ಪಡೆದಿದ್ದ ಬಗ್ಗೆ ತಿಳಿಸುತ್ತದೆ (ಪಾಟೀಲ ೧೯೯೭:೪೫). ದಕ್ಷಿಣ ಭಾರತ ವಾಸ್ತು ಶೈಲಿಯಲ್ಲಿ ಬಾದಾಮಿ ಚಾಲುಕ್ಯರ ಶೈಲಿಗೆ ಪ್ರತ್ಯೇಕ ಸ್ಥಾನವನ್ನು ನೀಡಲಾಗಿದೆ. ಇವರು ಮೂಲತಃ ವೈದಿಕ ಧರ್ಮವನ್ನು ಅವಲಂಬಿಸಿದ್ದರೂ ಜೈನ, ಬೌದ್ಧ, ಶೈವ ಹಾಗೂ ವೈಷ್ಣವ ಪಂಥಗಳಿಗೆ ಪ್ರತ್ಯೇಕ ಗುಹಾಲಯಗಳನ್ನು ಬಾದಾಮಿಯಲ್ಲಿ ನಿರ್ಮಿಸಿರುವುದು ಇವರ ಧಾರ್ಮಿಕ ಸಹಿಷ್ಣುತೆಗೆ ಉತ್ತಮ ನಿದರ್ಶನವಾಗಿದೆ.

## ಮಳಖೇಡದ ರಾಷ್ಟ್ರಕೂಟರ ಇತಿಹಾಸ

ಚಾಲುಕ್ಯರ ಪತನದ ನಂತರ ಗುಲಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೂಕಿನ ಮಳಖೇಡವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ.ಶ. ೭೫೭ರಿಂದ ೯೭೩ರವರೆಗೆ ೨೧೬ ವರ್ಷಗಳ ಕಾಲ ರಾಜ್ಯಭಾರ ಮಾಡಿದ ರಾಷ್ಟ್ರಕೂಟರು ಕರ್ನಾಟಕದ ಕೀರ್ತಿಯನ್ನು ಉತ್ತರ ಭಾರತದಲ್ಲಿಯೂ ಸ್ಥಾಪಿಸಿದರು. ರಾಷ್ಟ್ರಕೂಟ

ಎಂದರೆ ರಾಷ್ಟ್ರ ಎಂಬ ಆಡಳಿತ ವಿಭಾಗದ ಮುಖ್ಯಸ್ಥ. ಪ್ರಾಚೀನ ಕರ್ನಾಟಕದಲ್ಲಿ ದೇಶಮುಖ, ದೇಸಾಯಿ, ಗ್ರಾಮಕೂಟ ಎಂಬ ಪದಗಳು ಅಸ್ತಿತ್ವದಲ್ಲಿದ್ದವು. ರಾಷ್ಟ್ರ ಎಂಬ ಪದವನ್ನು ಸಂಸ್ಕೃತದಲ್ಲಿ ರಾಷ್ಟ್ರೀಯ ಮತ್ತು ಪ್ರಾಕೃತದಲ್ಲಿ ರಥಿಕಾ ಎಂದು ಉಪಯೋಗಿಸುತ್ತಿದ್ದರು. ಗರುಡ ಪಕ್ಷಿ ಇವರ ಲಾಂಛನವಾಗಿತ್ತು ಹೀಗೆ ಮಳಖೇಡವನ್ನು ಕೇಂದ್ರ ಆಡಳಿತವನ್ನಾಗಿ ಸುಮಾರು ೧೨ ಅರಸರು ಆಳ್ವಿಕೆ ಮಾಡಿದರು (ಬಸವರಾಜ ಅಕ್ಕಿ ೨೦೦೩: ೧೧೫).

ಈ ವಂಶದ ಮೂಲ ಅರಸನು ದಂತಿದುರ್ಗ(ಕ್ರಿ.ಶ ೭೩೫-೭೫೬). ಇವನು ರಾಷ್ಟ್ರಕೂಟ ವಂಶದ ಸಂಸ್ಥಾಪಕನಾಗಿ ಆಳ್ವಿಕೆ ಮಾಡಿದನು. ಇವನ ನಂತರ ಒಂದನೇ ಕೃಷ್ಣ(ಕ್ರಿ.ಶ. ೭೫೬-೭೭೪). ಇವನು ಹಲವಾರು ಬಿರುದುಗಳನ್ನು ಪಡೆದುಕೊಂಡಿದ್ದನು. ಕ್ರಿ.ಶ. ೭೬೮ರಲ್ಲಿ ಎಲ್ಲೋರಾದ ಕೈಲಾಸನಾಥ ದೇವಾಲಯ ಮತ್ತು ಬಸದಿಗಳನ್ನು ನಿರ್ಮಿಸಿದನು. ಹೀಗೆ ಇನ್ನೂ ಅನೇಕ ಪ್ರಸಿದ್ಧ ಅರಸರಾದ ಎರಡನೆಯ ಗೋವಿಂದ (ಕ್ರಿ.ಶ. ೭೭೪-೭೮೦), ತದನಂತರ ಧ್ರುವ ಕ್ರಿ.ಶ. ೭೮೦ ರಿಂದ ೭೯೩ರಲ್ಲಿ ಅಧಿಕಾರ ವಹಿಸಿಕೊಂಡಿದ್ದನು. ಇವನ ಮಗನಾದ ಮೂರನೇ ಗೋವಿಂದ ಕ್ರಿ.ಶ. ೭೯೩ ರಿಂದ ೮೧೪ವರೆಗೆ ಆಡಳಿತ ನಡೆಸಿದನು.

ಈ ಮನೆತನದ ಅರಸರಲ್ಲಿ ಅತ್ಯಂತ ಸುಪ್ರಸಿದ್ಧ ಹಾಗೂ ದಕ್ಷತೆಯಿಂದ ಆಳ್ವಿಕೆ ಮಾಡಿದವನು ಒಂದನೇ ಅಮೋಘವರ್ಷ (ಕ್ರಿ.ಶ. ೮೧೪ರಿಂದ ೮೭೮ರವರೆಗೆ). ತನ್ನ ಆಸ್ಥಾನಕ್ಕೆ ವಿವಿಧ ಮತಗಳ ಪಂಡಿತರನ್ನು ಕವಿಗಳನ್ನು ಬರಮಾಡಿಕೊಂಡನು. ಈತನು ವಿದ್ಯಾಪಕ್ಷಪಾತಿಯಾಗಿ ಧಾರ್ಮಿಕ ಸಹಿಷ್ಣುವು ಆಗಿದ್ದನು. ಅರಬ್ ಪ್ರವಾಸಿ ಸುಲೇಮಾನ್‌ನು ಅಮೋಘವರ್ಷನನ್ನು ಪ್ರಪಂಚದ ದೊಡ್ಡ ಸಾಮ್ರಾಟರೊಂದಿಗೆ, ಅಂದರೆ ಚೀನಾ, ಬಾಗ್ದಾದ್ ಮತ್ತು ಕಾನ್‌ಸ್ಟ್ಯಾಂಟಿನೋಪಲ್ ರಾಜರು ಸಹ ಪಂಕ್ತಿಯಲ್ಲಿ ಈತನನ್ನು ಹೋಲಿಸಿದ್ದಾನೆ. ಅಮೋಘವರ್ಷನು ತನ್ನ ರಾಜ್ಯಕ್ಕೆ ದಾರುಣ ಸಾಂಕ್ರಾಮಿಕ ರೋಗ ಹರಡಿದಾಗ ಅದರ ಪರಿಹಾರಾರ್ಥ ದೇವರಲ್ಲಿ ಮೊರೆಯಿಟ್ಟು ಕೊಲ್ಹಾಪುರದ ಮಹಾಲಕ್ಷ್ಮಿಗೆ ತನ್ನ ಬೆರಳನ್ನು ಮುಡುಪಾಗಿ ಅರ್ಪಿಸಿದನೆಂದು ಪ್ರತೀತಿಯಿದೆ. ಈತನ ಮರಣಾನಂತರ ಈತನ ಮಗ ಇಮ್ಮಡಿ ಕೃಷ್ಣನು ಅಧಿಕಾರಕ್ಕೆ ಬಂದನು.

ಗುಲಬರ್ಗಾ ಜಿಲ್ಲೆಯಲ್ಲಿ ರಾಷ್ಟ್ರಕೂಟ ವಂಶದ ಮುಮ್ಮಡಿ ಕೃಷ್ಣನ ಕಾಲದ ಮೂರು ಶಾಸನಗಳು ಮಾತ್ರ ಕಾಣಸಿಗುತ್ತವೆ. ಈಗಿನ ಯಾದಗಿರಿ ಜಿಲ್ಲೆಯ ಶಹಾಪುರ ತಾಲೂಕಿನ ಸಿರವಾಳದಲ್ಲಿ ದೊರೆತಿರುವ ಕ್ರಿ.ಶ. ೯೩೯ರ ಅಕಾಲವರ್ಷ ಮುಮ್ಮಡಿ ಕೃಷ್ಣನ ಶಾಸನದಲ್ಲಿ ಸಗರನಾಡಿನ ಉಲ್ಲೇಖವಿದೆ. ಗುಲಬರ್ಗಾದ ಜೇವರ್ಗಿ ತಾಲೂಕಿನ ಆಂದೋಲದಲ್ಲಿರುವ ಕ್ರಿ.ಶ. ೯೫೮ರ ಶಾಸನದಲ್ಲಿ ಕನ್ನರದೇವ ಅಕಾಲವರ್ಷನು ಕೃಷ್ಣನು ನವಖಂಡ ಪೃಥ್ವಿಯನ್ನು ಆಳುತ್ತಿದ್ದನೆಂಬ ಉಲ್ಲೇಖವಿದೆ. ಮುಮ್ಮಡಿ ಕೃಷ್ಣನ ಕ್ರಿ.ಶ. ೯೫೮ರ ಮೂರನೆಯ ಶಾಸನವು ಚಿಂಚೋಳಿ ತಾಲೂಕಿನ ನಿಡಗುಂದಿಯಲ್ಲಿ ದೊರೆತಿದ್ದು ಅಸ್ಪಷ್ಟವಾಗಿದೆ (ಪಾಟೀಲ ೧೯೯೭: ೪೮).

## ಕಲ್ಯಾಣದ ಚಾಲುಕ್ಯರು

ಗುಲಬರ್ಗಾದಲ್ಲಿ ಕಲ್ಯಾಣದ ಚಾಲುಕ್ಯರು ಆಳ್ವಿಕೆ ಮಾಡಿರುವುದಕ್ಕೆ ಶಾಸನಗಳು ದೊರೆತಿವೆ. ಕಲ್ಯಾಣದ ಚಾಲುಕ್ಯರ ನೂರಾರು ಶಾಸನಗಳು ಗುಲಬರ್ಗಾ ಜಿಲ್ಲೆಯಲ್ಲಿ ದೊರೆತಿದ್ದು ಅವರ ಆಡಳಿತದ ಪ್ರಭಾವವು

ಜಿಲ್ಲೆಯಾದ್ಯಂತ ಕಂಡುಬರುವುದು. ಚಾಲುಕ್ಯರ ೨ ಶಾಖೆಯ ಇಮ್ಮಡಿ ತೈಲನಿಂದ ರಾಷ್ಟ್ರಕೂಟರ ಇಮ್ಮಡಿ ಕರ್ಕನು ಸುಮಾರು ಕ್ರಿ.ಶ. ೯೭೩ರಲ್ಲಿ ಪರಾಜಯಗೊಂಡ ನಂತರ ಒಂದು ಕಾಲದಲ್ಲಿ ಪ್ರಬಲರಾಗಿದ್ದ ರಾಷ್ಟ್ರಕೂಟರ ಸಾಮ್ರಾಜ್ಯವು ಕ್ಷೀಣಿಸಿತು. ರಾಷ್ಟ್ರಕೂಟರ ಆಡಳಿತವನ್ನು ತೊರೆದು ಹಾಕಿದ ಎರಡನೇ ತೈಲಪ್ಪನು ಕ್ರಿ.ಶ. ೯೭೩ರಲ್ಲಿ ಮಾನ್ಯಖೇಟದಲ್ಲಿ ಅಧಿಕಾರ ಗ್ರಹಣ ಮಾಡಿದನು.

ಈ ಮನೆತನದ ಪ್ರಸಿದ್ಧ ಅರಸ ಆರನೆಯ ವಿಕ್ರಮಾದಿತ್ಯನು ಕಲ್ಯಾಣನಗರದಲ್ಲಿ ಪಟ್ಟಾಭಿಷಕ್ತನಾದನು. ಕ್ರಿ.ಶ. ೧೦೭೬ರಲ್ಲಿ ತನ್ನದೇ ಶಕೆಯನ್ನೇ ಪ್ರಾರಂಭಿಸಿದನು. ಈತನ ಆಸ್ಥಾನದ ಕವಿ ಬಿಲ್ಹಣನು ವಿಕ್ರಮನ ವೈಭವೋಪೇರಿತ ಆಳ್ವಿಕೆಯನ್ನು ತನ್ನ ಕೃತಿಯಿಂದ "ವಿಕ್ರಮಾಂಕ ದೇವ ಚರಿತ" ಹಾಗೂ ಆ ಕೃತಿಯ ನಾಯಕನಾಗಿ ವರ್ಣಿಸಿದ್ದಾನೆ(ಪಾಟೀಲ ೧೯೯೭: ೫೦). ಕಲ್ಯಾಣ ಚಾಲುಕ್ಯರ ಆಡಳಿತಾತ್ಮಕ ವಿಚಾರಗಳ ಬಗ್ಗೆ ಅಷ್ಟೊಂದು ಶಾಸನ ಆಧಾರಗಳು ಲಭ್ಯವಿಲ್ಲದಿರುವಾಗಲೂ ಧಾರ್ಮಿಕವಾಗಿ ಮತ್ತು ಶೈಕ್ಷಣಿಕ ಏಳ್ಗೆಗಾಗಿ ಅನೇಕ ದೇವಾಲಯಗಳು, ಅಗ್ರಹಾರಗಳು ನಿರ್ಮಿಸಿದ್ದುದಕ್ಕೆ ಅನೇಕ ಸ್ಮಾರಕಗಳು ಇಂದಿಗೂ ಈ ಪ್ರದೇಶದಾದ್ಯಂತ ಗೋಚರವಾಗುತ್ತಿವೆ. ಏವೂರು, ಮುದನೂರು, ಎಳೆವಾರ, ಕುಳಛೇರಿ, ಅಂದೇಲಿ, ಕೊಂಡಗುಳಿ, ಸಗರ, ಸಿರವಾಳ ಇವು ಪ್ರಸಿದ್ಧ ಅಗ್ರಹಾರ ಮತ್ತು ನಗರ ಪಟ್ಟಣಗಳಾಗಿದ್ದವು. ಗುಲಬರ್ಗಾ ಜಿಲ್ಲೆಯ ಅರಲು ೩೦೦ ಇಂದಿನ ಚಿತ್ತಾಪುರ ಹಾಗೂ ಸೇಡಂ ತಾಲ್ಲೂಕುಗಳ ಪ್ರದೇಶವಾಗಿತ್ತು. ಅಲ್ಲೂರು ಎಂಬ ಈಗಿನ ಗ್ರಾಮವೇ ಅರಲು ಎಂದು ಗುರುತಿಸಲಾಗಿದೆ. ಜೇವರ್ಗಿ ತಾಲೂಕಿನ ಅಂದೇಲಿಯಲ್ಲಿ ದೊರೆತಿರುವ ಶಾಸನವು ಅವಮಲ್ಲ ಮೊದಲನೇ ಸೋಮೇಶ್ವರ ಕಾಲಕ್ಕೆ(೧೦೫೦) ಸೇರಿದ್ದು ಚೆನ್ನಮಾಧವ ದೇವಾಲಯಕ್ಕೆ ಆತನು ನೀಡಿದ ದತ್ತಿಯನ್ನು ದಾಖಲಿಸುತ್ತದೆ.

ಒಂದನೆಯ ಸೋಮೇಶ್ವರ(ಚಿತ್ತಾಪೂರ ತಾಲೂಕು) ನಾಗಾಯಿ ಶಾಸನವು (೧೦೫೮) ಸ್ಥಳೀಯ ೬೦ ಕಂಭದ ದೇವಾಲಯದ ಮುಂಭಾಗದಲ್ಲಿರುವ ಸುದೀರ್ಘವಾದ ಈ ಶಾಸನದಲ್ಲಿ ನಾಗಾವಿಯ ಅಗ್ರಹಾರ ಘಟಿಕಾಸ್ಥಾನಕ್ಕೆ ಮಧುಪ ಅರಸ ದಣ್ಣಾಯಕನ ದತ್ತಿ ಬಿಟ್ಟ ವಿಚಾರವಿದೆ. ಆರನೇ ವಿಕ್ರಮಾದಿತ್ಯ(೧೧೧೧)ನ ಆಡಳಿತಾವಧಿಯಲ್ಲಿ ಮಧುವಣಭಟ್ಟನ ಮಗ ಆದಿತ್ಯಭಟ್ಟನು ದಂಡಾಧೀಶನಾಗಿದ್ದನೆಂದು ಹಾಗೂ ಈತನು ಆದಿತ್ಯೇಶ್ವರ ದೇವಾಲಯವನ್ನು ಕಟ್ಟಿಸಿ ಹಲವು ದತ್ತಿಗಳನ್ನು ನೀಡಿದ ವಿವರಗಳನ್ನು ಯಡ್ರಾಮಿಯ ಶಾಸನವೊಂದರಲ್ಲಿ ದಾಖಲಿಸಲಾಗಿದೆ.

ವಿಕ್ರಮಾದಿತ್ಯನ ಕಾಲದ ಯಡ್ರಾಮಿಯ ಬಸಣ್ಣನ ದೇವಾಲಯದ ಮುಂದಿರುವ ಶಾಸನವು ಸಗರನಾಡಿನ ಮಹಾಮಂಡಲೀಶ್ವರರಾದ ಹೈಹಯ ವಂಶದವರ ವಂಶಾವಳಿಯ ವಿವರವನ್ನು ನೀಡುತ್ತದೆ. ಗುಲಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೂಕಿನ ಮರ್ತೂರಿನ ಕ್ರಿ.ಶ. ೧೧೨೩ರ ತ್ರಿಭುವನಮಲ್ಲನ ಶಾಸನವು ಪೆರ್ಗಡೆ ಬೀಚರಾಜನ ಮರಿತೂರಲು(ಮರ್ತೂರು) ಕೇಶವ ದೇವರನ್ನು ಪ್ರತಿಷ್ಠಾಪಿಸಿದ ಬಗೆಗೆ ಉಲ್ಲೇಖಿಸುತ್ತದೆ. ಈ ಶಾಸನದಲ್ಲಿ ವಿಜ್ಞಾನೇಶ್ವರ ಉಲ್ಲೇಖವಿರುವುದರಿಂದ ಇದೊಂದು ಪ್ರಮುಖವಾದ ದಾಖಲೆಯಾಗಿದೆ ಎಂದು ಹೇಳಬಹುದು.

**ಕಲ್ಯಾಣ ಕಲಚೂರಿಗಳು**

ಈ ವಂಶದವರನ್ನು ಕಲಚೂರಿ ಎಂದೂ ಕರೆದರೂ ಕೂಡ 'ಕೇದಚೂರಿ', 'ಕಲಿಚೂರಿ' ಎಂಬ ಪದಗಳೂ ಶಾಸನಗಳಲ್ಲಿ ಕಂಡುಬರುತ್ತವೆ. ಗುಲಬರ್ಗಾ ಜಿಲ್ಲೆಯಲ್ಲಿ ಕಲಚೂರಿಗಳ ಕಾಲದ ಸುಮಾರು ೫೦ ಶಾಸನಗಳು ಇಲ್ಲಿಯವರೆಗೂ ಲಭ್ಯವಿದ್ದು ಸೇಡಂ ತಾಲೂಕಿನ ಅಡಕಿ ಗ್ರಾಮದ ರಾಯ ಮುರಾರಿ ಸೋಮದೇವನ ಕ್ರಿ.ಶ.೧೧೬೫ ರ ಶಾಸನವು ಮಹಾಪ್ರಧಾನ ದಂಡನಾಯಕ ಏಚರಸನು ಹಾಗೂ ಬಾಚಿದೇವರಸನೂ ಅಡಕಿಯ ಚೆನ್ನ ಪಾರ್ಶ್ವನಾಥ ಜಿನಾಲಯಕ್ಕೆ ನೀಡಿದ ಹಲವು ದತ್ತಿಗಳನ್ನು ಉಲ್ಲೇಖಿಸುತ್ತದೆ. ಅಫಜಲ್‌ಪುರ ತಾಲೂಕಿನ ಚಿನಮಳ್ಳಿಯಲ್ಲಿ ದೊರೆತಿರುವ ಕ್ರಿ.ಶ. ೧೧೬೭ರ ಶಾಸನವು ಕಲಚೂರಿ ರಾಯಮುರಾರಿ ಬಗ್ಗೆ ತಿಳಿಸುತ್ತದೆ. ಚಿತ್ತಾಪುರ ತಾಲೂಕಿನ ಕಾಳಿಗೆಯ ಕ್ರಿ.ಶ. ೧೧೭೩ರ ಶಾಸನವು ರಾಯಮುರಾರಿ ಸೋಮದೇವನು ಮಾದಿಗನೂರ ನೆಲೆವೀಡಿನಲ್ಲಿರುವಾಗ ದಂಡನಾಯಕ ಮಾದಯ್ಯನ ಆಡಳಿತ ಬಗ್ಗೆ ಪ್ರಸ್ತಾಪಿಸುತ್ತದೆ. ಕಾಳಿಗೆಯನ್ನು ರಾಜಧಾನಿ ಕಾಳುಗೆ ಎಂದು ಉಲ್ಲೇಖಿಸುತ್ತದೆ (ಪಾಟೀಲ ೧೯೯೭: ೫೫). ಈ ಶಾಸನಗಳಿಂದ ಕಲ್ಯಾಣದ ಕಲಚೂರಿಗಳು ಗುಲಬರ್ಗಾದಲ್ಲಿ ಆಳ್ವಿಕೆ ಮಾಡಿದರು ಎಂದು ಹೇಳಬಹುದು.

**ದೇವಗಿರಿಯ ಸೇವುಣರು**

ದೇವಗಿರಿಯ ಯಾದವರ ಇತಿಹಾಸವು ಕಲ್ಯಾಣ ಚಾಲುಕ್ಯರು ಮತ್ತು ಕಲಚೂರಿಗಳ ಆಧಿಪತ್ಯವು ಕೊನೆಗೊಂಡ ನಂತರ ಕರ್ನಾಟಕದಲ್ಲಿ ಪ್ರಾರಂಭವಾಯಿತು. ಐದನೇ ಭಿಲ್ಲಮನು(೧೧೮೫-೧೧೯೩) ಕಲಚೂರಿಯರನ್ನು ಮತ್ತು ಕಲ್ಯಾಣ ಚಾಲುಕ್ಯರನ್ನು ಸೋಲಿಸಿದ ನಂತರ ಅಲ್ಲಿಂದ ಮುಂದಕ್ಕೆ ಈ ವಂಶದ ಹೆಸರು ದೇವಗಿರಿಯ ಯಾದವರು ಅಥವಾ ಸೇವುಣರೆಂದೇ ಬಳಕೆಗೆ ಬಂದಿತು. ಗುಲಬರ್ಗಾ ಜಿಲ್ಲೆಯಲ್ಲಿ ಸೇವುಣರ ಕಾಲದ ಹಲವಾರು ಶಾಸನಗಳು ಲಭ್ಯವಿದ್ದು, ಶಹಾಪುರ ತಾಲೂಕಿನ ಶಿರವಾಳ ಭಿಲ್ಲಮನ ಕ್ರಿ.ಶ. ೧೧೮೯ ಶಾಸನವು ಅವನಿಗೆ ಅಧೀನರಾದ ಶಾಖೆಯ ಶಿಲಾಹಾರ ವಂಶದ ಎಳಮೇಲೆ ದೇವರಸನ ತಾಯಿ ನಾಗಲದೇವಿ ಮುಂತಾದವರ ಬಗೆಗೆ ವಿವರಿಸುತ್ತದೆ. ಚಿತ್ತಾಪುರ ತಾಲೂಕಿನ ಇಂಗಳಿಗೆಯ ಯಾದವ ಸಿಂಘಣನ ೧೨೦೯ರ ಶಾಸನವು ಮಹಾಮಂಡಳೇಶ್ವರ ಬಿಜ್ಜರಸ, ಇಂಗಳಿಗೆ ಪ್ರಭು ನಾಗರಸ, ಪಂಚಮದವರು ಮೂಲಸ್ಥಾನ ದೇವರಿಗೆ ಬಿಟ್ಟ ಭೂ ದತ್ತಿಯ ಬಗೆಗೆ ಉಲ್ಲೇಖಿಸುತ್ತದೆ. ಹೀಗೆ ಹಲವಾರು ಶಾಸನಗಳಿಂದ ಇವರ ಆಡಳಿತಕ್ಕೆ ಒಳಪಟ್ಟಿತ್ತು ಎಂದು ಹೇಳಬಹುದು.

**ವಿಜಯನಗರ ಸಾಮ್ರಾಜ್ಯ**

ವಿಜಯನಗರ ಸಾಮ್ರಾಜ್ಯವು ಕ್ರಿ.ಶ. ೧೩೩೬ರಲ್ಲಿ ಸಂಗಮನ ಮಕ್ಕಳಾದ ಹರಿಹರ ಮತ್ತು ಬುಕ್ಕರಾಯರಿಂದ ತುಂಗಭದ್ರಾ ನದಿ ದಂಡೆಯಲ್ಲಿರುವ ಪಂಪಾಕ್ಷೇತ್ರವೆಂದು ಪ್ರಸಿದ್ಧಿಯಾಗಿರುವ ಹಂಪಿಯಲ್ಲಿ ಸ್ಥಾಪನೆಯಾಯಿತು. ಈ ಸಾಮ್ರಾಜ್ಯ ಸ್ಥಾಪನೆಯ ಮುಖ್ಯ ಉದ್ದೇಶ ಮುಸ್ಲಿಮರ ದಾಳಿಗಳಿಂದ ಹಿಂದೂ ಧರ್ಮ ಮತ್ತು ಸಂಸ್ಕೃತಿಯನ್ನು ಸಂರಕ್ಷಿಸಿ ಪೋಷಿಸುವುದಾಗಿತ್ತು. ಈ ಸಾಮ್ರಾಜ್ಯ ಸ್ಥಾಪನೆಗೆ ವಿವಿಧ ಧರ್ಮಗುರುಗಳು ನೆರವಾಗಿದ್ದರು. ಗುಲಬರ್ಗಾ ಪ್ರದೇಶಕ್ಕೆ ಸಂಬಂಧಪಟ್ಟಂತೆ ಮಹಾನ್ ಸಾಮ್ರಾಜ್ಯದ ಅರಸರನ್ನು ಉಲ್ಲೇಖಿಸುವ

ಶಾಸನಗಳು ಕೃಷ್ಣದೇವರಾಯನ ಆಳ್ವಿಕೆಯ ಕಾಲದವರೆಗೆ ಲಭ್ಯವಿರುವುದಿಲ್ಲ. ಕೃಷ್ಣದೇವರಾಯನ ಕಾಲದ್ದೆಂದು ಹೇಳಲಾಗುವ ತಾಮ್ರಶಾಸನವು ಶಹಾಪುರದ ವಿಶ್ವಕರ್ಮರ ಏಕದಂಡಿ ಮಠದಲ್ಲಿದೆ ಎಂದು ಚಾರಿತ್ರಿಕ ದಾಖಲೆಗಳು ಹೇಳುತ್ತವೆ.

ಕೃಷ್ಣದೇವರಾಯನು ವಿಜಾಪುರದ ಅರಸನನ್ನು ಸೋಲಿಸಿ ಕ್ರಿ.ಶ. ೧೫೨೦ ರಲ್ಲಿ ನಾಲ್ಕು ದಿನ ವಿಜಾಪುರದ ರಾಜಧಾನಿಯಲ್ಲೇ ಇದ್ದನು. ರಾಯಚೂರು ದೋ-ಅಬ್ ಅನ್ನು ತನ್ನ ವಶಕ್ಕೆ ತೆಗೆದುಕೊಂಡನು. ಗುಲಬರ್ಗಾ, ಬೀದರ್ ಆಗ ಬಹಮನಿಗಳ ವಶದಲ್ಲಿದ್ದವು. ಕ್ರಿ.ಶ. ೧೫೨೩ರಲ್ಲಿ ಮಹಮ್ಮದನ ಮೊಮ್ಮಕ್ಕಳಾದ ಮೂರನೇ ಅಲ್ಲಾಉದ್ ದೀನ್ ವಲಿಉಲ್ಲಾ ಮತ್ತು ಕಲಿಮುಲ್ಲಾರನ್ನು ಅಮೀರರ ಕಪಿಮುಷ್ಟಿಯಿಂದ ಬಿಡುಗಡೆ ಮಾಡಿ ಅನಂತರ ಹಿರಿಯ ಮಗನಾದ ಮೂರನೇ ಅಲ್ಲಾವುದ್ದೀನ್ ವಲಿಉಲ್ಲಾನನ್ನು ಗುಲಬರ್ಗಾದ ಸುಲ್ತಾನನ್ನಾಗಿ ನೇಮಿಸಿ ಮತ್ತು ಕಲಿಮುಲ್ಲಾನನ್ನು ತನ್ನೊಡನೆ ವಿಜಯನಗರಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಸುರಕ್ಷಿತವಾಗಿಟ್ಟು ನೋಡಿಕೊಂಡನೆಂದು ತಿಳಿದುಬರುತ್ತದೆ.

**ಬಹಮನಿ ಸಾಮ್ರಾಜ್ಯ(ಕ್ರಿ.ಶ. ೧೩೪೭ - ೧೫೨೮)**

ಮಹಮ್ಮದ್ ಬಿನ್ ತುಘಲಕ್ ವಿರುದ್ಧ ಸ್ಫೋಟಗೊಂಡ ವಿವಿಧ ಪ್ರಾಂತ್ಯಗಳ ಬಂಡಾಯದ ಪ್ರಮುಖ ಪರಿಣಾಮವೆಂದರೆ, ಗುಲಬರ್ಗಾದಲ್ಲಿ ಬಹಮನಿ ಸಾಮ್ರಾಜ್ಯದ ಸ್ಥಾಪನೆಯೆಂದು ಹೇಳಲಾಗುತ್ತದೆ. ಕ್ರಿ.ಶ ೧೩೪೭ರಲ್ಲಿ ಹಸನ್‌ನನ್ನು ರಾಜನನ್ನಾಗಿ ಮಾಡಿದರು. ಇವನ ಪೂರ್ಣ ಹೆಸರು ಅಲ್ಲಾವುದ್ದೀನ್ ಹಸನ್ ಬಹಮನ್ ಷಾ ನಂತರ ಇವನು ಗುಲಬರ್ಗಾವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಗುಲಬರ್ಗಾದ ಮಸೀದಿಯೊಂದರಲ್ಲಿರುವ ಪರ್ಷಿಯನ್ ಶಾಸನವು ಈತನಿಗೆ ''ಸಿಖಂದರ್ ಇ ಸಾನಿ ಅಲ್ಲಾವುದ್-ದಿನ್ ಹಸನ್ ಬಹಮನ್ ಷಾ-ಅಲ್-ವಲಿ'' ಎಂಬ ಬಿರುದು ಇತ್ತೆಂದು ಉಲ್ಲೇಖಿಸುತ್ತದೆ. ಬಹಮನ್ ಷಾ ಎಂಬುದು ಈತನ ವಂಶದ ಮೂಲ ವ್ಯಕ್ತಿ ಆದರೆ ಫೆರಿಷ್ತಾನ ಹೇಳಿಕೆಯ ಪ್ರಕಾರ ಬ್ರಾಹ್ಮಣನೊಬ್ಬನಲ್ಲಿ ಅಲ್ಲಾವುದ್ದೀನ್ ಸೇವಕನಾಗಿದ್ದುದರಿಂದ ಮಾಲೀಕನ ಸ್ಮರಣೆಗಾಗಿ ತನ್ನನ್ನು ತಾನು ''ಗಂಗೂ ಬಹಮನಿ'' ಎಂದು ಕರೆದುಕೊಂಡನೆಂದು ವ್ಯಕ್ತವಾಗುತ್ತದೆ(ಪಾಟೀಲ ೧೯೯೭: ೬೧).

ಅಲ್ಲಾವುದ್ದೀನ್ ಬಹಮನ್ ಷಾ ತನ್ನ ರಾಜ್ಯವನ್ನು ನಾಲ್ಕು ತರಫ್ ಅಥವಾ ವಿಭಾಗಗಳಾಗಿ ವಿಂಗಡಿಸಿದ್ದನು. ಅವುಗಳೆಂದರೆ ದಾಬೋಳವರೆಗಿನ ಮತ್ತು ಕೃಷ್ಣ ತುಂಗಭದ್ರಾ ಪ್ರದೇಶಗಳನ್ನೊಳಗೊಂಡ ಅಸನ್‌ಬಾದ್-ಗುಲಬರ್ಗಾ, ದೌಲತ್‌ಬಾದ್, ಬೀದರ್ ಮತ್ತು ಕಾಂದಹಾರ್(ಇಂದೂರ್ ಮತ್ತು ತೆಲಂಗಾಣದ ಕೆಲವು ಪ್ರದೇಶಗಳನ್ನೊಳಗೊಂಡ ಬೀದರ್) ಇವುಗಳಲ್ಲಿ ಗುಲಬರ್ಗಾ ಪ್ರಾಂತ್ಯವೇ ಬಹಳ ಮುಖ್ಯವಾದ ಆಡಳಿತ ಘಟಕವಾಗಿತ್ತು. ಅಲ್ಲಾವುದ್ದೀನ್ ಬಹಮನ್ ಷಾ ಕ್ರಿ.ಶ. ೧೩೫೮ರಲ್ಲಿ ನಿಧನನಾದಾಗ ಆತನ ಮಗನಾದ ಮೊದಲನೇ ಮಹಮ್ಮದ್ ಷಾ(ಕ್ರಿ.ಶ ೧೩೫೮ - ೧೩೭೭) ಪಟ್ಟಕ್ಕೆ ಬಂದನು. ಬಹಮನ್ ಷಾನ ಆಳ್ವಿಕೆಯ ಅವಧಿಯಲ್ಲಿ ತನ್ನ ರಾಜಧಾನಿ ನಗರವಾದ ಗುಲಬರ್ಗಾವನ್ನು ಬೃಹತ್ ಕಟ್ಟಡಗಳಿಂದ ಹಾಗೂ ಉತ್ತಮ ನಗರ ವ್ಯವಸ್ಥೆಗಳಿಂದ ಆಧುನಿಕಗೊಳಿಸಿದನು. ಈ ಕಾಲದ ಪ್ರಸಿದ್ಧ ಸೂಫಿ ಸಂತರಾಗಿದ್ದ ಶೇಕ್ ಫಾರಿಬ್,

ಶೇಕ್ ಬಿಜಾಪುರಿ ಮತ್ತು ಶೇಕ್ ಜುನಾದಿಗಳಿಗೆ ಆಶ್ರಯ ನೀಡಿದನಲ್ಲದೆ ಸ್ವತಃ ಈ ಸೂಫಿ ಸಂತರ ನಿಷ್ಠಾವಂತ ಭಕ್ತನಾಗಿದ್ದನು(ಷೇಕ್ ಅಲಿ ೧೯೯೭: ೭೦).

ಮೊದಲನೇ ಮಹಮ್ಮದ್ ನಿಧನನಾದ ಮೇಲೆ ಕ್ರಿ.ಶ. ೧೩೭೫ರಲ್ಲಿ ಅವನ ಮಗ ಅಲ್ಲಾವುದ್ದೀನ್ ಮುಜಾಹಿದ್‌ನು ಪಟ್ಟಕ್ಕೆ ಬಂದನು. ಇವನು ಸಹ ವಿಜಯನಗರದೊಡನೆ ಸೆಣಸಾಟವನ್ನು ಮುಂದುವರೆಸಿದನು. ತದನಂತರ ಬಹಮನಿ ಸಿಂಹಾಸನವೇರಿದ ಎರಡನೇ ಮಹಮ್ಮದ್(ಕ್ರಿ.ಶ ೧೩೭೮ - ೧೩೯೭) ಒಬ್ಬ ಪರಿಣತ ಆಡಳಿತಗಾರ ಹಾಗೂ ಸ್ವತಃ ಪಂಡಿತನೂ ಆಗಿದ್ದನು. ಇವನು ತನ್ನ ಅಧಿಕಾರಿ ಫಬ್ರಿ ಇ ದವಲಾ ಮತ್ತು ಮುರಾಲ್ ಪಾ ಸುಲ್ತಾನೆ ಎಂಬ ಆತನ ಹೆಂಡತಿ ಇಬ್ಬರ ನೇತೃತ್ವದಲ್ಲಿ ಗುಲಬರ್ಗಾದಲ್ಲಿ ಮಸೀದಿ ಕಟ್ಟಿಸಿದ ಬಗ್ಗೆ ಈತನ ಕ್ರಿ.ಶ. ೧೩೯೪-೯೫ರ ಪರ್ಷಿಯನ್ ಶಾಸನವು ಉಲ್ಲೇಖಿಸುತ್ತದೆ.

ಹಸನ್ ಬಹಮನ್ ಷಾನ ಮೊಮ್ಮಗನಾಗಿದ್ದ ತಾಜುದ್ದೀನ್ ಫಿರೋಜನು (ಕ್ರಿ.ಶ. ೧೩೯೭ - ೧೪೨೨) ತನ್ನ ಆಡಳಿತವನ್ನು ಪವಿತ್ರ ಕುರಾನ್ ಗ್ರಂಥದ ತತ್ವಗಳ ಅನುಕರಣೆಯ ಮೂಲಕ ರಾಜ್ಯಭಾರ ಮಾಡುತ್ತಿದ್ದನು. ಸ್ತ್ರೀಯರಿಗೆ ವಿಶೇಷ ಸ್ಥಾನಮಾನ ನೀಡಿದನು (ಕಾಮತ್ ೧೯೮೪: ೨೩೭). ಗುಲಬರ್ಗಾ ಹಾಗೂ ಫೀರೋಜಾಬಾದ್‌ಗಳಲ್ಲಿ ಅನೇಕ ಕಟ್ಟಡಗಳನ್ನು ನಿರ್ಮಿಸಿದನೆಂದು ತಿಳಿದು ಬರುತ್ತದೆ. ಸ್ಪೇನಿನ ಕೊರ್ಡೋಲಾ ಎಂಬಲ್ಲಿರುವ ಸುಂದರವಾದ ಮಸೀದಿಯ ಮಾದರಿಯಲ್ಲೇ ಗುಲಬರ್ಗಾದಲ್ಲಿ ಜುಮ್ಮಾ ಮಸೀದಿಯನ್ನು ನಿರ್ಮಿಸಿದನು. ಈತನ ತಮ್ಮನಾದ ಅಹಮ್ಮದ್ ಸುಮಾರು ೨೦೦೦೦ ಸೇನೆಯ ಬಲದೊಂದಿದೆ ೨೨ ಸೆಪ್ಟೆಂಬರ್ ೧೪೨೨ರಲ್ಲಿ ಗುಲಬರ್ಗಾದ ಮೇಲೆ ದಾಳಿ ಮಾಡಿ ಸಾಮ್ರಾಜ್ಯದ ಸುಲ್ತಾನನೆಂದು ಪಟ್ಟಾಭಿಷಿಕ್ತನಾದನು. ಫೀರೋಜ್ ಶಾಹನ ಮರಣಾನಂತರ ಅಹಮ್ಮದ್ ಶಾಹನು ರಾಜಧಾನಿಯನ್ನು ಗುಲಬರ್ಗಾದಿಂದ ಬೀದರ್‌ಗೆ ಸ್ಥಳಾಂತರಿಸಿದನು.

**ಬಿಜಾಪುರದ ಆದಿಲ್‌ಷಾಹಿಗಳು(ಕ್ರಿ.ಶ. ೧೪೮೯-೧೬೮೬)**

ಬಹಮನಿ ಸಾಮ್ರಾಜ್ಯವು ಪತನಗೊಂಡ ನಂತರ ಅಸ್ತಿತ್ವಕ್ಕೆ ಬಂದ ಐದು ಪ್ರಮುಖ ಷಾಹಿ ರಾಜ್ಯಗಳಲ್ಲಿ ಬಿಜಾಪುರದ ಆದಿಲ್‌ಷಾಹಿಗಳ ಸಾಮ್ರಾಜ್ಯವು(೧೪೯೦) ಪ್ರಮುಖವಾದುದು. ಯೂಸುಫ್ ಆದಿಲ್‌ಖಾನನು ಕ್ರಿ.ಶ. ೧೪೯೦ರಲ್ಲಿ ಸ್ವತಂತ್ರವಾಗಿ ಹೊಸದೊಂದು ರಾಜ್ಯವನ್ನು ಸ್ಥಾಪಿಸಿಕೊಂಡನೆಂದು ತಿಳಿದುಬರುತ್ತದೆ. ಕ್ರಿ.ಶ. ೧೫೧೦ರಲ್ಲಿ ಗೋವೆಯನ್ನು ಪೋರ್ಚುಗೀಸರಿಂದ ಕಿತ್ತುಕೊಂಡನು. ಇದರ ತರುವಾಯ ಅದೇ ವರ್ಷ ಸಂಭವಿಸಿದ ವಿಜಯನಗರದ ವಿರುದ್ಧದ ಯುದ್ಧದಲ್ಲಿ ಯೂಸುಫ್ ಆದಿಲ್ ಷಾ ನಿಧನನಾದನು. ಈತನ ಸಮಾಧಿಯು ಇವನು ಪೂಜಿಸುತ್ತಿದ್ದ ಶಹಾ ಹಬೀಬುಲ್ಲಾ ಸಂತನ ಸಮಾಧಿಯ ಬಳಿಯಲ್ಲಿ ಮೊದಲು ಗುಲಬರ್ಗಾ ಜಿಲ್ಲೆಯ ಶಹಪುರ ತಾಲೂಕಿನ ಗೋಗಿಯಲ್ಲಿರುವುದು. ಆದರೆ ಈಗ ಯಾದಗಿರಿ ಜಿಲ್ಲೆಗೆ ಸೇರಿಕೊಂಡಿದೆ. ಆದಿಲ್ ಷಾಹನ ತರುವಾಯ ಅವನ ಮಗನಾದ ಇಸ್ಮಾಯಿಲ್ ಕ್ರಿ.ಶ. ೧೫೧೦ರಲ್ಲಿ ಪಟ್ಟಕ್ಕೆ ಬಂದನು. ಈತನ ದುರ್ಬಲತೆಯನ್ನು ಉಪಯೋಗಿಸಿಕೊಂಡು ಕೃಷ್ಣದೇವರಾಯನು ಕ್ರಿ.ಶ. ೧೫೧೨ರಲ್ಲಿ ರಾಯಚೂರನ್ನು ಬಿಜಾಪುರದಿಂದ ಗೆದ್ದುಕೊಂಡನು. ನಂತರ ಕೆಲವೇ ವರ್ಷಗಳ ತರುವಾಯ ರಾಯಚೂರನ್ನು ಬಿಜಾಪುರದ ಸುಲ್ತಾನನು ಮರಳಿ ಗೆದ್ದುಕೊಂಡನು(ಪಾಟೀಲ ೧೯೯೭: ೭೬).

**ಹೈದರಾಬಾದ್ ನಿಜಾಮ ವಂಶದ ಉದಯ(ಕ್ರಿ.ಶ ೧೭೨೪-೧೯೪೮)**

ಔರಂಗಜೇಬ್‌ನ ನೆಚ್ಚಿನ ದಂಡನಾಯಕನಾಗಿ ಸೇವೆ ಸಲ್ಲಿಸಿದ್ದ ನಿಜಾಮ ಉಲ್ ಮುಲ್ಕ್ ಆಸಫ್ ಜಾಹ ಕ್ರಿ.ಶ. ೧೭೧೩ರಲ್ಲಿ ನಿಜಾಮ ಅಥವಾ ಅಸಫ್‌ಜಾಹಿ ವಂಶದ ಸ್ಥಾಪನೆಯನ್ನು ಮಾಡಿದನೆಂದು ಹೇಳಲಾಗುತ್ತದೆ. ಆಸಫ್‌ಜಾಹಿ ಔರಂಗಜೇಬ್ ನಿಧನದ ತರುವಾಯ ಕ್ರಿ.ಶ ೧೭೧೩ರಲ್ಲಿ ದಖ್ಖನಿನ ಸುಬೇದಾರನಾಗಿ ನೇಮಕಗೊಂಡ ಮೇಲೆ ದಕ್ಷಿಣ ಭಾಗದ ಆಡಳಿತವನ್ನು ತನ್ನ ಹತೋಟಿಗೆ ತೆಗೆದುಕೊಂಡು ಹಲವು ಪರಿವರ್ತನೆಗಳನ್ನು ತರುವಲ್ಲಿ ಪ್ರಮುಖ ಪಾತ್ರ ವಹಿಸಿದನು. ಇವನನ್ನು ಕ್ರಿ.ಶ. ೧೭೧೯ರಲ್ಲಿ ಮಾಳ್ವದ ಸುಬೇದಾರನಾಗಿ ನೇಮಕ ಮಾಡಲಾಯಿತು(ಪಾಟೀಲ ೧೯೯೭: ೭೨). ಮುಂದುವರೆದು ಆಕ್ಟೋಬರ್ ಕ್ರಿ.ಶ ೧೭೨೪ರಲ್ಲಿ ಹೈದರಾಬಾದನ್ನು ತನ್ನ ವಶಕ್ಕೆ ತೆಗೆದುಕೊಂಡು ಅಲ್ಲಿಯೇ ನೆಲೆಸಿದನು. ಗುಲಬರ್ಗಾದ ಜಿಲ್ಲೆಯಲ್ಲಿ ಈ ವೇಳೆಗಾಗಲೇ ಮೂರು ರಾಜಕೀಯ ಶಕ್ತಿಗಳನ್ನು ದಮನ ಮಾಡಿ ನಿಜಾಮ ಆಳ್ವಿಕೆಗೆ ಒಳಪಟ್ಟ ಗುಲಬರ್ಗಾ ಪ್ರದೇಶದಲ್ಲಿ ಹಿಂದೂ-ಮುಸ್ಲಿಂ ದಂಗೆಗಳು ಕರಾಳ ಸ್ವರೂಪ ಪಡೆದವು.

ಜನಾರ್ದನ ದೇಸಾಯಿ ಅವರು ದೇವಾಲಯಗಳು ತಿಳಿಸುವಂತೆ ನಗರದಲ್ಲಿ ಪ್ರಮುಖ ಹಾಗೂ ಶರಣರಬಸವೇಶ್ವರ ದೇವಾಲಯವನ್ನು ಕೆಡುವಲು ಪ್ರಯತ್ನಗಳು ನಡೆದವು. ಹರಿಜನ ಪತ್ರಿಕೆಯಲ್ಲಿ ಗಾಂಧೀಜಿಯವರು "ಗುಲಬರ್ಗಾ ಗಾನ್ ಮ್ಯಾಡ್" ಎಂಬ ಲೇಖನ ಬರೆದು ಪ್ರಕಟಿಸಿರುವುದು ಈ ಸಂದರ್ಭದಲ್ಲಿಯೇ. ೧೯೨೭ರಲ್ಲಿ ಗಾಂಧೀಜಿಯವರು ಗುಲಬರ್ಗಾಕ್ಕೆ ಭೇಟಿ ನೀಡಿ ಶರಣಬಸವೇಶ್ವರ ದೇವಾಲಯ ಸಂದರ್ಶಿಸಿದರು. ಹೀಗೆ ಹೈದರಾಬಾದ್ ಸಂಸ್ಥಾನವು ಗುಲಬರ್ಗಾ ಪ್ರದೇಶದಲ್ಲಿ ಅನೇಕ ಚಟುವಟಿಕೆಗಳ ಕೇಂದ್ರವಾಗಿತ್ತು ಎಂದು ತಿಳಿದುಬರುತ್ತದೆ.

ಗುಲಬರ್ಗಾ ಪ್ರದೇಶದ ಚರಿತ್ರೆಯನ್ನು ಅಧ್ಯಯನ ಮಾಡಿದ ಕೃತಿಗಳನ್ನು ಅವಲೋಕಿಸಿದಾಗ ಅವು ಪ್ರಾಚೀನ ಶಿಲಾಯುಗದಿಂದ ಹಿಡಿದು ಕ್ರಿ.ಶ. ೨೦೦೯ರವರೆಗಿನ ವಿವಿಧ ಹಂತಗಳಲ್ಲಿ ಚರಿತ್ರೆಯನ್ನು ಅನುಲಕ್ಷಿಸಲು ಆಧಾರಗಳಾಗಿವೆ.

೧.೫. ಜಾತ್ರೆಗಳ ಲಕ್ಷಣಗಳು

ಜಾತ್ರೆಗಳನ್ನು ನಡೆಸಿಕೊಂಡು ಬರುತ್ತಿರುವುದರಿಂದ ಅನೇಕ ಪ್ರಯೋಜನಗಳು ಜನರಿಗೆ ಆಗುತ್ತಿವೆ. ಜಾತ್ರೆಗಳಿಂದ ಪ್ರತಿಯೊಬ್ಬನ ಮನಸ್ಸಿನಲ್ಲಿ ಉಲ್ಲಾಸ , ಸಂತೋಷವನ್ನು ಮೂಡಿಸುತ್ತದೆ. ಜಾತ್ರೆಗಳಿಂದಇಂದಿನ ಸಾಮಾಜಿಕ ಬದುಕಿನಲ್ಲಿ ನಿರುದ್ಯೋಗ, ಬಡತನ, ಜಾತೀಯತೆ ಮತ್ತು ಮೇಲುಕೀಳುಗಳೆಂಬ ಅಂತರದಿಂದ ಮುಕ್ತಿ ಪಡೆದಂತಾಗುತ್ತದೆ. ವರ್ಷಕ್ಕೊಮ್ಮೆ ನಡೆಯುವ ಜಾತ್ರೆ ಅಥವಾ ಉರುಸ್‌ಗಳು ಬಡವ ಬಲ್ಲಿದರೆನ್ನದೆ, ಸ್ತ್ರೀ-ಪುರುಷರೆನ್ನದೇ ಹರ್ಷದಿಂದ ಕಾಲ ಕಳೆಯುವುದಕ್ಕೆ ಮಾನವನ ಮನಸ್ಸು ಬಯಸುತ್ತದೆ. ಜಾತ್ರೆಗಳು ಸಮಾಜದ ಬಹುಮುಖ್ಯ ಅವಿಭಾಜ್ಯ ಅಂಗಗಳಾಗಿರುವುದನ್ನು ಇಲ್ಲಿ ಗಮನಿಸಬಹುದು. ಜಾತ್ರೆಗಳ ಕುರಿತಾದ ಧನಾತ್ಮಕ ಅಂಶಗಳನ್ನು ಹೀಗೆ ಹೇಳಬಹುದಾಗಿದೆ.

೧. ಜಾತ್ರೆ ನಡೆಯುವುದರಿಂದ ಪ್ರತಿಯೊಂದು ಜಾತಿ-ಜನಾಂಗ, ವರ್ಣದ ಭೇದಭಾವವಿಲ್ಲದೆ ಜನತೆ ಭಾಗವಹಿಸುತ್ತಾರೆ. ಇಲ್ಲಿನ ಸಮುದಾಯ ಪ್ರಜ್ಞೆಗಳ ನಂಬಿಕೆ ಆಚರಣೆಗಳನ್ನು ಗಮನಿಸಬಹುದಾಗಿದೆ.

೨. ಜಾತ್ರೆಯಲ್ಲಿ ನಡೆಯುವ ಆಚರಣೆ, ನಂಬಿಕೆ, ಸಂಪ್ರದಾಯಗಳೆಲ್ಲವೂ ಫಲವಂತಿಕೆ ಮತ್ತು ಸಮೃದ್ಧಿಯನ್ನು ಕುರಿತ ಅಂಶಗಳಾಗಿವೆ.

೩. ಜಾತ್ರೆಗಳು ವಿವಿಧ ವರ್ಗಗಳ ನಡುವಿನ ಸಂಘರ್ಷದಿಂದ ನಡೆದರೂ, ಇಲ್ಲಿ ಐಕ್ಯತಾ ಭಾವನೆಯನ್ನು ಬೆಳೆಸುತ್ತವೆ.

೪. ಜಾತ್ರೆಗಳಲ್ಲಿ ಗಂಡು ಹೆಣ್ಣುಗಳು ಮುಕ್ತವಾಗಿ ಬೆರೆಯುವದರಿಂದ ಸಾಮಾಜಿಕ ಕಟ್ಟುಪಾಡುಗಳನ್ನು ಮುರಿದು ಅಂತರ್‌ಜಾತೀಯ ಸೌಹಾರ್ದತೆಗೆ ಅವಕಾಶ ಕಲ್ಪಿಸಿಕೊಡುತ್ತವೆ.

೫. ಜಾತ್ರೆಗಳಲ್ಲಿ ನಡೆಯುವ ಆಚರಣೆಗಳೆಲ್ಲವೂ, ಧಾರ್ಮಿಕ ಭಾವನೆಯನ್ನು ಬೆಳೆಸುವುದರ ಮೂಲಕ ವೈಚಾರಿಕ ಮತ್ತು ವೈಜ್ಞಾನಿಕತೆಯನ್ನು ಬೆಳೆಸುತ್ತವೆ.

ಜಾತ್ರೆಯಲ್ಲಿ ಭಾಗವಹಿಸಿದ ಪ್ರತಿಯೊಬ್ಬರಿಗೂ ಧಾರ್ಮಿಕ ಮತ್ತು ಲೌಕಿಕ ಸುಖದ ಭಾವನೆಗಳು ಒಡಮೂಡುತ್ತವೆ. ಇದರಿಂದ ಧಾರ್ಮಿಕ, ಆರ್ಥಿಕ, ಸಾಮಾಜಿಕ, ತಾತ್ವಿಕ ಹಾಗೂ ರಾಜಕೀಯ ಸಂಘಟನೆಗಳು ನಿರ್ಮಾಣಗೊಂಡಿರುತ್ತವೆ. ಇವೆಲ್ಲದರ ಒಟ್ಟು ಆಶಯ ಸಮಷ್ಟಿ ಮತ್ತು ವ್ಯಷ್ಟಿಯ ಹಿತವನ್ನು ಕಾಪಾಡಿಕೊಂಡು ಬರುತ್ತಿರುವುದರಿಂದ ಜನತೆಗೆ ಅನೇಕ ಪ್ರಯೋಜನೆಗಳು ಆಗುತ್ತಿರುವುದು ಕಂಡುಬರುತ್ತದೆ.

**ಜಾತ್ರೆಯ ವೈಶಿಷ್ಟ್ಯಗಳು**

ಕನ್ನಡ ಜನಪದ ವಿದ್ವಾಂಸರು ಜಾತ್ರೆಯಲ್ಲಿ ನಡೆಯುತ್ತಿರುವ ವಿವಿಧ ಬಗೆಯ ಆಚರಣೆಗಳನ್ನು ಗಮನಿಸಿ, ಜಾತ್ರೆಯ ಲಕ್ಷಣಗಳನ್ನು ನೀಡುವ ಪ್ರಯತ್ನ ಮಾಡಿದ್ದಾರೆ. ಆದರೆ ಸ್ಪಷ್ಟವಾದ ಸ್ವರೂಪ ಲಕ್ಷಣಗಳನ್ನು ನೀಡಲು ಸಾಧ್ಯವಾಗಿಲ್ಲ. ಇದಕ್ಕೆ ಮುಖ್ಯ ಕಾರಣ ಜಾತ್ರೆಗಳ ಅನನ್ಯತೆ. ಬೇರೆ ಬೇರೆ ಪ್ರದೇಶದಲ್ಲಿ ನಡೆಯುವ ಜಾತ್ರೆಗಳ ಸ್ವಭಾವವು ಭಿನ್ನವಾಗಿರುತ್ತವೆ. ಈ ತರಹದ ವೈವಿಧ್ಯತೆಗಳನ್ನು ಒಳಗೊಂಡಿರುವ ಜಾತ್ರೆಗಳಿಗೆ ಸಂಬಂಧ ಪಟ್ಟಂತೆ, ಸಾರ್ವತ್ರಿಕವಾದ ವ್ಯಾಖ್ಯೆಯನ್ನು ಕೊಡುವುದು ಕಷ್ಟ. ಜನಪದರ ದೃಷ್ಟಿಯಲ್ಲಿ ನಡೆದುಕೊಂಡು ಬರುತ್ತಿರುವ ಜಾತ್ರೆಗಳು ಸಾಮಾನ್ಯ ಲಕ್ಷಣಗಳನ್ನು ಒಳಗೊಂಡಿರುತ್ತದೆ.

**ಸಾಂಸ್ಕೃತಿಕ ಸಂಘರ್ಷ**

ಸಂಸ್ಕೃತಿ ಎನ್ನುವುದು ಒಂದು ಸಮೂಹದ ಬಹುಸಂಖ್ಯಾತ ಒಪ್ಪಿಗೆಯನ್ನು ಪಡೆಯುವವರೆಗೆ, ಅದು ಒಂದು ಬದ್ಧ ವ್ಯವಸ್ಥೆಯ ವಿರೋಧಿಯಾಗಿರುತ್ತದೆ. ಇಂತಹ ಬದಲಾವಣೆಗಾಗಿ ಸಂಸ್ಕೃತಿಯೊಳಗೆ ಸಂಘರ್ಷಗಳು ನಡೆಯುತ್ತವೆ.

ಉದಾಹರಣೆಗಾಗಿ ಮಾರಿ ಜಾತ್ರೆಯನ್ನು ತೆಗೆದುಕೊಂಡರೆ ಇಲ್ಲಿ ಶಿಷ್ಟ ಮತ್ತು ದಲಿತ ಸಂಸ್ಕೃತಿಗಳ ಸಂಘರ್ಷವು ನಡೆಯುತ್ತದೆ. ಜಾತ್ರೆಯಲ್ಲಿ ಮೂಲತಃ ಜಾತಿಯ ಪಾವಿತ್ರ್ಯವನ್ನು ನಾಶ ಮಾಡಿದ ದಲಿತನ ಅಪರಾಧಕ್ಕಾಗಿ ಪ್ರತಿ ವರ್ಷ ಕೋಣವನ್ನು ಸಾಂಕೇತಿಕವಾಗಿ ಬಳಸಿಕೊಂಡು ದಲಿತನಿಗೆ ನೀಡುವ ಶಿಕ್ಷೆಯಾಗಿದೆ.

**ಮುಕ್ತ ಬಂಧ**

ಜನಪದರು ಜಾತ್ರೆಯಲ್ಲಿ ಯಾವುದೇ ತರಹದ ಸಂಕೋಚಗಳಿಲ್ಲದೆ ಮುಕ್ತವಾಗಿ ಭಾಗವಹಿಸುತ್ತ ಬಂದಿರುವುದನ್ನು ಕಾಣಬಹುದು. ಜಾತ್ರೆಯಲ್ಲಿ ಜನತೆಯ ಸಹಕಾರ ಸಂಘಟನಾಶಕ್ತಿ ಹುಟ್ಟುತ್ತದೆ. ಇಲ್ಲಿ ಪರಸ್ಪರ ಪ್ರೀತಿ, ವಿಶ್ವಾಸ ಏರ್ಪಟ್ಟು ಮನುಷ್ಯರ ನಡುವಿನ ಕ್ರೌರ್ಯ, ವೈಷಮ್ಯಗಳು ಕಡಿಮೆಯಾಗಿ ಮಾನವೀಯತೆಯು ಮೂಡುತ್ತದೆ. ಇಲ್ಲಿ ಭಾಗವಹಿಸುವವರೆಲ್ಲ ದೇವರ ಮಕ್ಕಳೆಂದು ಭಾವಿಸಿಕೊಳ್ಳಲಾಗುತ್ತದೆ. ಹೀಗೆ ಜಾತ್ರೆಗಳು ಪ್ರತಿಯೊಬ್ಬರಿಗೂ ಪರಸ್ಪರವಾಗಿ ಮುಕ್ತವಾಗಿ ಪ್ರವೇಶಿಸುವುದಕ್ಕೆ ಆಚರಣೆಗಳ ಪ್ರೋತ್ಸಾಹಕ್ಕೆ ಈ ತರಹದ ಮುಕ್ತ ಅವಕಾಶವನ್ನು ಜಾತ್ರೆಗಳು ಕಲ್ಪಿಸಿಕೊಟ್ಟಿವೆ. ಐಕ್ಯತೆಯ ಭಾವನೆ ಮೂಡುತ್ತವೆ.

**ಸಾಂಸ್ಕೃತಿಕ ಸಂಬಂಧಗಳ ಅನನ್ಯತೆ**

ಜಾತ್ರೆಯ ಸಮಯದಲ್ಲಿ ಅನೇಕ ಬಗೆಯ ಜನಪದರು ಸಂಸ್ಕೃತಿಯವರು ಸೇರಿಕೊಂಡಿರುತ್ತಾರೆ. ಇವರು ವಿವಿಧ ಸಂಸ್ಕೃತಿಗಳೊಂದಿಗೆ ಅನ್ಯೋನ್ಯವಾದ ಸಂಬಂಧಗಳನ್ನು ಹೊಂದಿರುತ್ತಾರೆ. ತಮ್ಮ ಸಾಂಸ್ಕೃತಿಕ ಸಮೃದ್ಧಿಯನ್ನು ಹಾಡುವ ಕುಣಿಯುವ ನಂಬಿಕೆ ಸಂಪ್ರದಾಯದಂತಹ ಸೃಜನಶೀಲತೆಯನ್ನು ಸಾಹಸವನ್ನು ಮೆರೆಯುತ್ತವೆ. ''ಒಂದು ಸಂಸ್ಕೃತಿ ತನ್ನ ಅನನ್ಯತೆಯನ್ನು ಗುರುತಿಸಲು ಮತ್ತು ಸ್ಥಾಪಿಸಲು ಅತೀವ ಕ್ರಿಯಾಶೀಲವಾಗುವುದು ಅದು ಇನ್ನೊಂದು ಪ್ರಬಲ ಸಂಸ್ಕೃತಿಯೊಡನೆ ಮುಖಾಮುಖಿಯಾದಾಗ ಮಾತ್ರ'' ಸಾಧ್ಯವಾಗುತ್ತದೆ(ರಾಮಚಂದ್ರನ್ ೨೦೦೦: ೭೨). ಜಾತ್ರೆಯಲ್ಲಿ ನಡೆಯುವ ಪ್ರತಿಯೊಂದು ಆಚರಣೆಗಳಲ್ಲೂ ಜನಪದರ ಸೌಹಾರ್ದ ಜೀವನ, ಸರ್ವೋದಯದ ವಿಚಾರಗಳು ಧಾರ್ಮಿಕ ಮತ್ತು ಸಾಂಸ್ಕೃತಿಕ ಅಂಶಗಳೆಲ್ಲವೂ ಕ್ರಿಯಾತ್ಮಕತೆಯಿಂದ ಕೂಡಿರುವುದನ್ನು ಕಾಣುತ್ತೇವೆ.

**ಜಾತ್ರೆಯ ಮಹತ್ವ**

ಜಾತ್ರೆ ಬಹೂಪಯೋಗಿ ಸಂಸ್ಥೆ. ನಾವು ಅದನ್ನು ಅಂದಿನಿಂದ ಇಂದಿನವರೆಗೆ ಹಲವು ವಿಧವಾಗಿ ದುಡಿಸಿಕೊಂಡಿದ್ದೇವೆ. ಸಾವಿರಾರು ವರ್ಷಗಳ ಇತಿಹಾಸವುಳ್ಳ ಈ ಸಂಸ್ಥೆ ಅಕಸ್ಮಾತ್ತಿನಿಂದ ಹುಟ್ಟಲಿಲ್ಲ; ನಿಷ್ಪ್ರಯೋಜಕವಾಗಿ ಉಳಿಯಲಿಲ್ಲ; ಆಕಸ್ಮಾತಿನಿಂದ ಕಣ್ಮರೆಯಾಗುವುದೂ ಇಲ್ಲ.

ಜಾತ್ರೆ ಧರ್ಮವನ್ನು ಜನಪ್ರಿಯಗೊಳಿಸಿತು. ಭಕ್ತರನ್ನು ಒಂದೇ ದೇವರ ಸಾನ್ನಿಧ್ಯಕ್ಕೆ ತಂದಿತು. ಪಂಡರಪುರದ ವಿಠೋಬ, ಸವದತ್ತಿ ಎಲ್ಲಮ್ಮ, ಧರ್ಮಸ್ಥಳದ ಮಂಜುನಾಥ ಇವರೆಲ್ಲ ನಮ್ಮ ಬೆನ್ನಿಗಿದ್ದಾರೆ ಎಂಬುದನ್ನು ಖಚಿತಪಡಿಸಿತು. ವರ್ಷಾವಧಿ ಜಾತ್ರೆಗೆ ಹೋಗಿ ಹರಕೆ ಸಂದಾಯ ಮಾಡುವುದು ನಮ್ಮ ಜನಪದರ ಕಷ್ಟಗಳಿಗೆ ಪರಿಹಾರ ಕೊಡುವ ಒಂದು ಮುಖ್ಯ ಅಂಶವಾಗಿದೆ. ಜಾತ್ರೆಗಳ ಧಾರ್ಮಿಕ ಮಹತ್ವವನ್ನು ಒತ್ತಿ ಹೇಳುವಾಗ ನಾವು ಅವುಗಳ ಆರ್ಥಿಕ ಮಹತ್ವವನ್ನು ಕಡೆಗಣಿಸುವ ಸಂಭವವುಂಟು. ಧರ್ಮ ಪ್ರಧಾನವೆನ್ನಿಸಿಕೊಳ್ಳುವ ಭಾರತದಲ್ಲಿಯೂ ಪ್ರಾಚೀನ ಕಾಲದಲ್ಲಿ ಜಾತ್ರೆಗಳು ವಾಣಿಜ್ಯ ವ್ಯವಹಾರಗಳಿಗಾಗಿ ಹೆಸರು ಪಡೆದಿದ್ದುವಂತೆ. ಅಂತೆಯೇ ಪ್ರಾಚೀನ ಗ್ರೀಸ್ ದೇಶದ ಜಾತ್ರೆಗಳಲ್ಲಿ ಕಾಜಿನ ಸರಗಳು, ಬಟ್ಟೆಬರೆಸ ಮಸಾಲೆ ಜೀನಸು, ಶಸ್ತ್ರಾಸ್ತ್ರಗಳು ಮಾರಲ್ಪಡುತ್ತಿದ್ದುವಂತೆ.

ಜಾನಪದ ಸಂದರ್ಭದಲ್ಲಿ ಮೋಕ್ಷದ ಬಗ್ಗೆ ಹೇಳುವುದು ಉತ್ಪ್ರೇಕ್ಷೆಯಾಗಬಹುದು. ಈಗಿನ ಜಾತ್ರೆಯಲ್ಲ, ಆದರೆ ಆಗಿನ ಯಾತ್ರೆಗಳು ಮೋಕ್ಷದಾಯಕ ಎಂಬ ಭಾವನೆ ಪ್ರಚಲಿತವಾಗಿತ್ತು. ಹಿಂದೂ ಆಗಿ ಹುಟ್ಟಿದವನು ತನ್ನ ಆಯುಷ್ಯದಲ್ಲಿ ಒಂದಾದರೂ ಯಾತ್ರೆಗೆ ಹೋಗಬೇಕು. ಮುಸಲ್ಮಾನನು ದೂರದ ಹಜ್ ಯಾತ್ರೆಗೆ ಹೋಗಲಾಗದಿದ್ದರೆ ಹತ್ತಿರದ ಉರುಸ್‌ಗೆ ಹೋಗಬೇಕು. ಯಾತ್ರೆಯಂತೆ ಜೈನರಲ್ಲೂ, ಸಿಖ್ಖರಲ್ಲೂ ಇಂಥ ನಂಬಿಕೆಗಳಿವೆ. ಹಿಂದೂಗಳಿಗೆ ನಾಲ್ಕು ಧಾಮಗಳು, ಮೂರು ಸ್ಥಳಗಳು, ಏಳು ಪುರಗಳು, ಹನ್ನೆರಡು ಜ್ಯೋತಿರ್ಲಿಂಗಗಳು, ಐವತ್ತೆರಡು ಶಕ್ತಿ ಪೀಠಗಳಿವೆ. ಇವು ಶಿಷ್ಟರಿಗೆ ಸಂಬಂಧಿಸಿದ್ದರೆ ಗ್ರಾಮೀಣರಿಗೆ ಗ್ರಾಮದೇವತೆಗಳ ಜಾತ್ರೆಗಳುಂಟು. ಮೋಕ್ಷದ ಸಂಪೂರ್ಣಕಲ್ಪನೆ ಅವರಿಗೆ ಇರಲಿ ಬಿಡಲಿ, ತಾವು ಕಣ್ಣು ಮುಚ್ಚುವ ಮೊದಲು ಒಂದಾದರೂ ಜಾತ್ರೆಯನ್ನು ನೋಡಬೇಕೆಂದು ಅವರು ಬಯಸುತ್ತಾರೆ (ಶಿವಕುಮಾರ ಸ್ವಾಮಿ ೧೯೮೮: ೮೧-೮೫).

೧.೬. ಜಾತ್ರೆ ಸಾಂಪ್ರದಾಯಿಕ ವಿಧಿ-ವಿಧಾನಗಳು

ಭಾರತವು ಧಾರ್ಮಿಕ ನೆಲೆಗಟ್ಟಿನ ಮೇಲೆ ನಿಂತಿರುವ ದೇಶ. ಇಲ್ಲಿ ಹಲವಾರು ಧರ್ಮ, ಜಾತಿ, ಜನಾಂಗದವರು ವಾಸವಾಗಿದ್ದು ತಮ್ಮದೇ ಆದ ಧರ್ಮಾಚರಣೆಗಳು, ರೂಢಿ, ಸಂಪ್ರದಾಯಗಳನ್ನು ತಮ್ಮ ಜೀವನದಲ್ಲಿ ರೂಢಿಗತವಾಗಿಸಿಕೊಂಡಿದ್ದಾರೆ. ಅಲ್ಲದೆ ತಮ್ಮ ಆರಾಧ್ಯ ದೈವಗಳ ಮಹಿಮೆಯನ್ನು ಜಪಿಸುವರು ಮತ್ತು ಇನ್ನೂ ಕೆಲವು ದೇವರುಗಳ ಉತ್ಸವಗಳನ್ನು, ದೇವರುಗಳ ಪುಣ್ಯ ಸ್ಮರಣೆಗಾಗಿ ಜಾತ್ರೆಗಳನ್ನು ಹಮ್ಮಿಕೊಳ್ಳುತ್ತಾರೆ. ಆದರೆ ಹಂಪ ನಾಗರಾಜಯ್ಯ ಅವರು ಜಾತ್ರೆಗಳಲ್ಲಿ ಎರಡು ಭಾಗ ಮಾಡಿರುವುದು ಗಮನಾರ್ಹ. "ಶಿಷ್ಟ ದೇವರುಗಳ ಸಮ್ಮುಖದಲ್ಲಿ ಜರುಗುವ ಜಾತ್ರೆಗಳಿಗಿಂತ ಗ್ರಾಮೀಣರು ನಡೆಸುವ ಜಾತ್ರೆಗಳು ಭಿನ್ನವಾಗಿರುತ್ತವೆ. ಶಿಷ್ಟ ದೇವರ ಜಾತ್ರೆಗಳಿಗೆ ಪುರಾಣದ ಹಿನ್ನೆಲೆಯಿರುತ್ತದೆ. ಪೂಜಾ ರೀತಿಗಳೆಲ್ಲವೂ ಶಾಸ್ತ್ರಬದ್ಧವಾಗಿಯೇ ನಡೆಯುತ್ತವೆ." ಆರ್ಯ ಮತ್ತು ಶಿಷ್ಟ ದೇವತೆಗಳ ಜಾತ್ರೆಗಳಿಗಿಂತ ದ್ರಾವಿಡ ಹಾಗೂ ಗ್ರಾಮದೇವತೆಗಳ ಜಾತ್ರೆಗಳು ಜಾನಪದ ಅಧ್ಯಯನಕ್ಕೆ ಉತ್ತಮ ಗ್ರಾಸ ಒದಗಿಸುತ್ತವೆ.

ಕೊಸಾಂಬಿ ಹೇಳುವ ಪ್ರಕಾರ, ''ಬೆಂಗಳೂರು ನಗರದಲ್ಲಿ ವರ್ಷಕ್ಕೊಮ್ಮೆ ಕರಗ ಹಬ್ಬವನ್ನು ಆಚರಿಸುತ್ತಾರೆ. ಆದರೆ ಇಲ್ಲಿನ ವೈಶಿಷ್ಟ್ಯತೆ ಎಂದರೆ ಅಂದಿನ ದಿವಸ ಪುರುಷರು ಮಹಿಳೆಯರಂತೆ ವಸ್ತ್ರಗಳನ್ನು ಧರಿಸುವುದು ಕಂಡುಬರುತ್ತದೆ. ಇದರಿಂದ ಸ್ತ್ರೀಶಕ್ತಿ ದೇವತೆಗಳ ಮಹಿಮೆ ಕುರಿತು ತಿಳಿದುಕೊಳ್ಳಬಹುದು.''

ದೇ. ಜವರೇಗೌಡರು ''ಸಂಸ್ಕೃತಿಯನ್ನು ಹಿರಿಯದು-ಕಿರಿಯದು, ಮೇಲಿನದು-ಕೆಳಗಿನದು, ಗ್ರಾಮ್ಯ-ನಾಗರಿಕ, ವೈದಿಕ-ಅವೈದಿಕ ಎಂಬ ವರ್ಗೀಕರಣ ಮಾಡುವುದು ಅನುಚಿತ, ಅಸಹಜ'' ಎನ್ನುವ, ಅವರು ಜಾನಪದ ಸಂಸ್ಕೃತಿ, ನಾಗರಿಕ ಸಂಸ್ಕೃತಿಗಳಲ್ಲಿ ವ್ಯತ್ಯಾಸವಿಲ್ಲದಿದ್ದರೂ ಸಮಾನಾಂತರವಾಗಿಯೇ ವಿಕಾಸ ಹೊಂದುವವೆಂದು ಹೇಳಿ, ಜಾತ್ರೆಗಳಲ್ಲೂ ಜಾನಪದ ಶಿಷ್ಟಪದ ಎಂಬ ವಿಭಜನೆ ಸೂಕ್ತವಾಗಬಹುದೆನ್ನುತ್ತಾರೆ (ಹಿರೇಮಠ ೧೯೯೩: ೩೭-೩೮).

ಜಾಪದೀಯ ದೃಷ್ಟಿಕೋನದಲ್ಲಿ ಜಾತ್ರೆಯ ಕೆಲವು ವಿಶೇಷ ಸಂದರ್ಭದಲ್ಲಿ ಸಾಮಾನ್ಯವಾಗಿ ಮತ್ತು ಸಾರ್ವತ್ರಿಕ ಇಚ್ಛೆಯಂತೆ ರೂಢಿ ಸಂಪ್ರದಾಯಗಳ ಸಂಕೀರ್ಣತೆಯಲ್ಲಿ ಆಚರಿಸಲಾಗುವುದು. ಬಾಗ್ಸ್ ಇಂಗ್ಲಿಷ್ ವಿದ್ವಾಂಸ, Festivalಗೆ ಈ ರೀತಿಯ ವ್ಯಾಖ್ಯಾನವನ್ನು ಹೇಳಿದ್ದಾನೆ. ಕಾಂಪ್ಲೆಕ್ಸ್ ಯುನಿಟ್ ಆಫ್ ಕಸ್ಟಮ್ಸ್ ಆ್ಯಂಡ್ ಅದರ್ ಫೋಲ್ಕಲೋರ್ ಟು ಸೆಲೆಬ್ರೆಟ್ ಎ ಸ್ಪೆಷೆಲ್ ಓಕೆಷನ್ ಯುಜಿಯಲಿ ಆ್ಯಂಡ್ ಅಪ್ ಪಬ್ಲಿಕ್ ಇಸ್ಪ್ರೆಸ್ಸ್ (ನಾಗೇಶ ೨೦೧೧: ೧೯). ಉಲ್ಲೇಖಿಸಿದ್ದಾರೆ. ಜಾತ್ರೆಯ ವಿಷಯದಲ್ಲಿ ೧೧ ಜನ ಸೇರಿದರೆ ಜಾತ್ರೆ ೧೧ ಎಂಬ ನಾಣ್ಣುಡಿ ಇದೆ. ಆದರೆ ಕೇವಲ ಬರೀ ಜನರು ಸೇರಿದರೆ ಜಾತ್ರೆಯಾಗಲಾರದು ಸಂತೆಯಾಗುತ್ತದೆ. ವ್ಯವಹಾರದ ವೇದಿಕೆಯಾಗುತ್ತದೆ. ಆದ್ದರಿಂದ ನಿಜವಾದ ಜಾತ್ರೆಯು ಹಬ್ಬದ ಸ್ವರೂಪವನ್ನು ಪಡೆದಿರುತ್ತದೆ ಮತ್ತು ಅದರ ಮುಂದುವರೆದ ಭಾಗವಾಗಿರುತ್ತದೆ. ಇದು ಧಾರ್ಮಿಕ ವಿಷಯಗಳನ್ನು ಪ್ರಧಾನವಾಗಿ ಒಳಗೊಂಡಿರುತ್ತದೆ. ನಿರ್ದಿಷ್ಟ ಸ್ಥಿರೀಕರಿಸುವ ಸಂತೋಷ ಸಮಾರಂಭವಾಗಿ ಅದು ಅರ್ಥೈಸುತ್ತಿದೆ (ಚಂದ್ರಬಾಬು; ೨೦೧೦: ೧೮).

## ಜಾತ್ರೆ ಪದದ ನಿಷ್ಪತ್ತಿ

ಜಾತ್ರೆ ಎಂಬ ಪದವು ಯಾತ್ರೆ ಎಂಬ ಸಂಸ್ಕೃತ ಪದದ ತದ್ಭವ ರೂಪವಾಗಿದೆ. 'ಜಾತ್ರೆ' 'ಪರಿಷೆ' 'ಪರ್ಷೆ' ಈ ಪದಗಳು ಸಹ ಕನ್ನಡಕ್ಕೆ ಬಂದಿರುವ ಸಂಸ್ಕೃತ ಪದಗಳಾಗಿವೆ. ಸಂಸ್ಕೃತದ 'ಪರಿಷತ್' ಪದ ಪರಿಷೆ, ಪರ್ಷೆಯಾಗಿ ಕನ್ನಡದಲ್ಲಿ ಬಳಕೆಯಾಗುತ್ತಿದೆ. ಜಾತ್ರೆ, ಯಾತ್ರೆ ಎಂಬ ಎರಡು ಪದಗಳ ನಡುವಿನ ಸಂಬಂಧದ ಬಗ್ಗೆ ವಿದ್ವಾಂಸರು ಚಿಂತಿಸಿರುವುದನ್ನು ಗಮನಿಸಬಹುದು. "ದ್ರಾವಿಡ ಜನಾಂಗಗಳ ಮೇಲೆ ವೈದಿಕರ ಪ್ರಭಾವವನ್ನು ಇದು ಸೂಚಿಸುತ್ತದೆ. ಹಾಗಿದ್ದರೆ ಈ ಪರಭಾಷೆಗೆ ಮೊದಲು ದ್ರಾವಿಡರಲ್ಲಿ ಜಾತ್ರೆಯನ್ನು ಸೂಚಿಸುವ ಪದ ಯಾವುದಾಗಿತ್ತು? 'ತೇರು' ದ್ರಾವಿಡ ಪದ ಇದು ಜಾತ್ರೆಯ ನಿರ್ದಿಷ್ಟವಾದ ಒಂದು ಕಾರ್ಯಕ್ರಮನ್ನಷ್ಟೇ ಸೂಚಿಸುತ್ತದೆ.

'ತೇರು ಹರಿದ ಮೇಲೆ ಪರಿಸೆಗೇನು ಕೆಲಸ' ಎಂಬ ಗಾದೆಯಲ್ಲಿ ತೇರು ಜಾತ್ರೆಯ ಮುಕ್ತಾಯವನ್ನು ಸೂಚಿಸುವುದು. ಸಾಮಾನ್ಯರು ಹಲವೆಡೆ ಜಾತ್ರೆಗೆ ಹೋಗುವ ಎಂಬರ್ಥದಲ್ಲಿ 'ತೇರಿಗೆ ಹೋಗು' ಎಂಬುದಾಗಿ ಬಳಸುತ್ತಾರೆ" (ಹಿರೇಮಠ ೧೯೯೩: ೩೯).

ಜಾತ್ರೆಯ ಉಗಮ: ಆರಾಧನೆಗೆ ಜಾತ್ರೆ, ಜಾತ್ರೆಗೆ ಆರಾಧನೆ ಪೂರಕವಾಗಿರುತ್ತದೆ. ಜಾತ್ರೆ ಮತ್ತು ಆರಾಧನೆಯ ಸ್ವರೂಪ ಬೇರೆ ಬೇರೆಯಾದರೂ ಉದ್ದೇಶ ಒಂದೇ ಆಗಿದೆ. ಜಾತ್ರೆಯಲ್ಲಿ ಆರಾಧನೇ ಇದ್ದೇ ಇರುತ್ತದೆ. ಜಾತ್ರೆಗಳ ಉಗಮವನ್ನು ನಿಖರವಾಗಿ ಹೇಳುವುದು ಕಷ್ಟವಾದರೂ ಸ್ಥೂಲವಾಗಿ ಪ್ರಾರಂಭದಲ್ಲಿ ಆರಾಧನೆ, ಅನಂತರ ಜಾತ್ರೆಗಳು ಎನ್ನಬಹುದು. ಭಾರತದಲ್ಲಿನ ಪ್ರಮುಖ ಜಾತ್ರೆಗಳಾದ ಶ್ರೀಶೈಲದ ಜಾತ್ರೆ, ಪ್ರಯಾಗದ ಕುಂಬಮೇಳದಲ್ಲಿ ಸೇರುವ ಜಾತ್ರೆ, ತಲಕಾಡಿನ ಪಂಚಲಿಂಗ ಜಾತ್ರೆ, ತಿರುಪತಿ ಬ್ರಹ್ಮೋತ್ಸವ, ದಕ್ಷಿಣ ಕರ್ನಾಟಕದಲ್ಲಿ ಕೊಳ್ಳೇಗಾಲದ ಮಹದೇಶ್ವರನ ಬೆಟ್ಟದ ಜಾತ್ರೆ, ಮೈಸೂರಿನ ಚಾಮುಂಡಿ ಜಾತ್ರೆ, ಬೆಂಗಳೂರಿನ ಸುಬ್ರಹ್ಮಣ್ಯ ಜಾತ್ರೆ, ಮುಂತಾದ ಜಾತ್ರೆಗಳು ಆರಾಧನೆಯ ಹಿನ್ನೆಲೆಯಲ್ಲಿರುತ್ತವೆ.

ಜಾತ್ರೆಗಳು ಒಂದು ರಾಜ್ಯ ಮತ್ತು ದೇಶಕ್ಕೆ ಸೀಮಿತವಲ್ಲ. ಈಜಿಪ್ಟ್, ಫ್ರಾನ್ಸ್ ಹಾಗೂ ಇಟಲಿಗಳಲ್ಲಿನ ಅತ್ಯಂತ ಹಳೆಯ ಮಾದರಿಯ ಜಾತ್ರೆಗೆ 'ಫೇರಾರ್' ಎನ್ನುತ್ತಾರೆ. ಫೇರ್-ಫೇರಾರ್ ಹಬ್ಬ. ಜರ್ಮನಿನ 'messe' ಎಂದರೆ ದೇವ ಪ್ರಾರ್ಥನೆಯ ಸಮಾರಂಭವನ್ನು ಸೂಚಿಸುತ್ತದೆ. ಅದು ರಜಾದಿನ. ಅಂದೇ ಫೇರ್ ನಡೆಸುವುದು ಪ್ರಶಸ್ತ ಎಂಬ ಭಾವನೆ ಹುಟ್ಟಿ ಬೆಳೆದಿದೆ. ಜಾತ್ರೆಗಳು ಒಂದೇ ಸಮಯದಲ್ಲಿ ಅಥವಾ ಬೇರೆ ಬೇರೆ ಕಾಲದಲ್ಲಿ ಹುಟ್ಟಿಕೊಂಡರೂ ನಿಧಾನವಾಗಿ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಅನುಕರಣದ ಮೂಲಕ ಬೆಳೆದು ಬಂದಿರಬೇಕು. ಮಾನವನ ಮನಸ್ಸು ನಿರ್ದಿಷ್ಟವಾಗಿರಲಾರದು. ಹಾಗೆಯೇ ಅಲ್ಲಲ್ಲಿಯ ಜಾತ್ರೆಯ ಸ್ವರೂಪ ವಿಧಿ-ವಿಧಾನಗಳಲ್ಲಿ ಭಿನ್ನತೆ ಹಾಗೂ ಸಾಮ್ಯತೆ ಕಾಣಬಹುದೆಂದು ದೇ. ಜವರೇಗೌಡರು ಅಭಿಪ್ರಾಯಪಡುತ್ತಾರೆ (ಜಗನ್ನಾಥ ೧೯೯೬: ೨೧-೨೨).

ಆರ್ಥಿಕ ಪ್ರಚೋದನೆ ಅಥವಾ ವ್ಯಾಪಾರ ವಹಿವಾಟಿನ ಅಗತ್ಯವೇ ಜಾತ್ರೆಗೆ ಮೂಲಪ್ರೇರಣೆಯಾಗಿದ್ದರೆ ಪ್ರಾಚೀನ ಕಾಲದ ಜಾತ್ರೆಗಳು ಒಂದಲ್ಲ ಒಂದು ದೈವದ ನೆಲೆ. ಇಲ್ಲವೇ ಗುಡಿ ಗುಂಡಾರ ಸಾಧುಸತ್ಪುರುಷರ ಸಮಾಧಿಗಳ ಬಳಿಯಲ್ಲಿಯೇ ಏಕೆ ನಡೆಯುತ್ತಿದ್ದವು ಎನ್ನುವುದು ಒಂದು ಸಮಾಧಾನಕರ ವಿಚಾರ. ಅಂತಹ ಪವಿತ್ರ ಸ್ಥಳಗಳನ್ನು ಆರಿಸಿಕೊಂಡರೆ ಯಾವುದಕ್ಕೂ ಜಗ್ಗದ ಮೋಸಗಾರರು ಇಲ್ಲಿರುವ ದೈವಗಳಿಗೆ ಅಥವಾ ಪ್ರೇತಾತ್ಮಗಳಿಗೆ ಹೆದರಿಕೊಂಡು ಯೋಗ್ಯ ರೀತಿಯಲ್ಲಿ ವ್ಯಾಪಾರ ನಡೆಯುತ್ತವೆಯೆಂದು ಹಾಗೂ ಶಾಂತಿ ಪಾಲನೆಗೆ ಸುಲಭವಾದೀತು ಎಂಬುದು ಜನರ ಭಾವನೆಯಾಗಿತ್ತು. ಫ್ರಾನ್ಸ್ ದೇಶದ ಶಾಂಪೇನ್ ಪ್ರದೇಶದ ಜಾತ್ರೆ ಪ್ಯಾರಿಸ್ ಹತ್ತಿರದ ಸಂತ ಡೇನಿಸ್ ಜಾತ್ರೆ, ಥಸಲೋನಿರಾದ ಸಂತ ಡೆಮಿಟ್ರಿಯನ್ ಜಾತ್ರೆ, ರೋಮ್ ಮತ್ತು ಇಂಗ್ಲೆಂಡ್ ದೇಶಗಳ ಬಹುತೇಕ ಜಾತ್ರೆಗಳು ಅಂತಹ ಪವಿತ್ರ ಸ್ಥಳದಲ್ಲಿಯೇ ಹುಟ್ಟಿ ಬೆಳೆದವು (ಜಗನ್ನಾಥ್ ೧೯೯೬: ೨೩).

ಈ ರೀತಿಯಾಗಿ ಜಾತ್ರೆಗಳ ಉಗಮದ ಬಗ್ಗೆ ವಿದ್ವಾಂಸರ ಹೇಳಿಕೆಗಳನ್ನು ಗಮನಿಸಿದಾಗ ಕರ್ನಾಟಕದಲ್ಲಿ ಜಾತ್ರೆಗಳ ಹುಟ್ಟು ಬೆಳವಣಿಗೆ ಬಗ್ಗೆ ಹೇಳವುದು ಅತೀ ಅವಶ್ಯಕವಾಗಿದೆ. ಇದರ ಕುರಿತು ದೇಜಗೌ ಅವರು ಕರ್ನಾಟಕದ ಜಾತ್ರೆಗಳು ವಿಚಾರ ಸಂಕಿರಣ ಸಮಾರೋಪ ಭಾಷಣದಲ್ಲಿ ಹೀಗೆ ಹೇಳುತ್ತಾರೆ.

"ಕನ್ನಡ ನಾಡಿನಲ್ಲಿ ಜಾತ್ರೆಗಳು ಎಂದು ಆರಂಭವಾದವು ಎಂದು ಖಚಿತವಾಗಿ ಹೇಳಲಾಗದು. ಮೊಟ್ಟ ಮೊದಲಿಗೆ 'ಬ್ರಹ್ಮಶಿವನ ಸಮಯಪರೀಕ್ಷೆ' ಮತ್ತು 'ಯಶೋಧರ ಚರಿತೆ'ಗಳಲ್ಲಿ ಜಾತ್ರೆಗಳ ವಿವರಣೆ ಬರುತ್ತದೆ. 'ತೇರು' ಎನ್ನುವ ಪದ ಪ್ರಪ್ರಥಮವಾಗಿ ಪಂಪನಲ್ಲಿ ದೊರೆಯುತ್ತದೆ. 'ತೇರು' ಜಾತ್ರೆಗಳ ಅನಿವಾರ್ಯ ಅಂಗವಾಗಿದ್ದರಿಂದ ಒಂದು ಸಾವಿರ ವರ್ಷಗಳ ಹಿಂದಕ್ಕೆ ಜಾತ್ರೆಗಳ ಇತಿಹಾಸವನ್ನು ಒತ್ತರಿಸಲು ಸಾಧ್ಯವಿದೆ." (ಶಿವಕುಮಾರ ಸ್ವಾಮಿ ೧೯೮೮: ೨೩೯).

ಜಾತ್ರೆಯ ಸ್ವರೂಪ ಅಥವಾ ಲಕ್ಷಣಗಳನ್ನು ಅವಲೋಕಿಸಿದಾಗ ಪ್ರತಿವರ್ಷ ಸಾಧಾರಣವಾಗಿ ಸುಗ್ಗಿಯ ನಂತರ ದೇವರುಗಳ ಗೌರವಾರ್ಥ ಜಾತ್ರೆ ನಡೆಸುವ ವಾಡಿಕೆಯಿದೆ. ಹಳ್ಳಿಪಟ್ಟಣಗಳ ದೇವಾಲಯ, ದರ್ಗಾ ಮತ್ತು ಚರ್ಚ್ ಮುಂತಾದ ಪವಿತ್ರ ಪೂಜಾಸ್ಥಳಗಳಲ್ಲಿ ಜನರು ಜಾತ್ರೆಗಳನ್ನು ನಡೆಸುತ್ತಾರೆ. ದೇವರ ಮೂರ್ತಿಯನ್ನು

ರಥದಲ್ಲಿ ಇಲ್ಲವೇ ಜೀಪು ಲಾರಿಗಳಲ್ಲಿಟ್ಟು ವಾದ್ಯಗಳ ಸಹಿತ ಮೆರವಣಿಗೆಯಲ್ಲಿ ಹೋಗುವರು. ಅದೇ ಸಮಯದಲ್ಲಿ ಬಾಳೆಹಣ್ಣು, ಅಳ್ಳು, ಖಾರಿಕು, ಮುಂತಾದವುಗಳು ತೇರು ಇಲ್ಲವೆ ವಾಹನಗಳ ಮೇಲೆ ಎಸೆಯುತ್ತಾ ಮುನ್ನಡೆಯುವರು. ಜಾತ್ರೆಯ ಹೆಸರಿನಲ್ಲಿ ಸ್ಥಳ ಮತ್ತು ದೇವರ ಹೆಸರು ಸೇರಿರುತ್ತದೆ.

ಉದಾಹರಣೆಗೆ ಬೀದರ ನಗರದಿಂದ ಎರಡು ಕಿ.ಮೀ. ದೂರದಲ್ಲಿರುವ 'ಪಾಪನಾಶನಿ' ದೇವಾಲಯದಲ್ಲಿ ಸ್ವಯಂಭುಲಿಂಗವಿದೆ. ಅಲ್ಲಿ ಪ್ರತಿ ವರ್ಷ ಶಿವರಾತ್ರಿಯಂದು ಮೂರು ದಿನಗಳ ಕಾಲ ಜಾತ್ರೆ ನಡೆಯುತ್ತದೆ. ಈ ಜಾತ್ರೆಗೆ 'ಪಾಪನಾಶ' ಲಿಂಗದ ಜಾತ್ರೆ ಇಲ್ಲವೆ 'ಪಾಪನಾಶನಿ' ಜಾತ್ರೆ ಎನ್ನುವ ವಾಡಿಕೆಯಿದೆ. ಅದರಂತೆಯೇ ದೇವರಗಾಣಗಾಪೂರ ದತ್ತಾತ್ರೇಯ ಜಾತ್ರೆ, ಬಸವಕಲ್ಯಾಣದ ಬಸವಣ್ಣನ ಜಾತ್ರೆ, ಕಲಬುರ್ಗಿಯ ಶರಣಬಸವೇಶ್ವರ ಜಾತ್ರೆಯು ಅತೀ ವಿಜೃಂಭಣೆಯಿಂದ ಜರುಗುತ್ತವೆ. ಹತ್ತಾರು ಸ್ಥಳಗಳಿಂದ ಜನರು ಒಂದೆಡೆ ಕಲೆತು ಹರಟೆ ಹೊಡೆಯುವುದು, ನಡುವಿನ ಸಂಪರ್ಕ ನವೀಕರಿಸಿಕೊಳ್ಳುವರು. ರಾತ್ರಿ ಹೊತ್ತಿನಲ್ಲಿ ಭಜನೆ, ಕೀರ್ತನೆ, ಉಪನ್ಯಾಸ, ಮನರಂಜನೆ ಕಾರ್ಯಕ್ರಮಗಳು ಇರುತ್ತವೆ (ಜಗನ್ನಾಥ ೧೯೯೬: ೨೪-೨೫).

೧.೭. ಉಪಸಂಹಾರ

ಪ್ರಸ್ತುತ ಅಧ್ಯಾಯವು ಸೂಕ್ಷ್ಮರೀತಿಯಲ್ಲಿ ಅವಲೋಕಿಸಿದಾಗ ಪ್ರತಿಯೊಂದು ಅಂಶಗಳು ಜನಪದರ ಬದುಕಿನ ಪ್ರತಿಯೊಂದು ಹಂತದಲ್ಲಿ ಕಾಣುತ್ತೇವೆ. ಹಿಂದೂ ಇಸ್ಲಾಂ ಧರ್ಮಗಳು ಉಲ್ಲೇಖಿಸುವ ನೀತಿ, ನಿಯಮ, ಸಂಪ್ರದಾಯಗಳನ್ನು ಚಾಚೂ ತಪ್ಪದೆ ಪಾಲಿಸಿಕೊಂಡು ಬರುತ್ತಿವೆ. ಅದರ ನಡುವಲ್ಲಿ ಸೌಹಾರ್ದತೆಯ ಅಂಶಗಳನ್ನು ಜನರಿಗೆ ಮನದಟ್ಟು ಮಾಡಿಸುತ್ತಿರುವುದನ್ನು ಕಂಡುಕೊಳ್ಳಬಹುದಾಗಿದೆ.

## ಟಿಪ್ಪಣಿಗಳು

೧. ಪಾಟೀಲ ಎಂ.ಬಿ. ಅವರು ಗುಲಬರ್ಗಾ ಗ್ಯಾಜೆಟಿಯರ್‌ನಲ್ಲಿ ಗುಲಬರ್ಗಾ ಪ್ರದೇಶವು ಹೊಂದಿದ ಗಡಿ ಭಾಗಗಳ ವಿವರಣೆ ಪಡೆಯಲಾಗಿದೆ. ಗುಲಬರ್ಗಾವು ೨೦೧೦ರ ವರ್ಷದ ಪೂರ್ವದಲ್ಲಿ ಕರ್ನಾಟಕದಲ್ಲಿ ಎರಡನೇ ಅತಿ ಹೆಚ್ಚು ವಿಸ್ತೀರ್ಣತೆ ಹೊಂದಿದ ಜಿಲ್ಲೆಯಾಗಿತ್ತು. ಆದರೆ ಯಾದಗಿರಿ ತಾಲೂಕನ್ನು ಜಿಲ್ಲೆಯಾಗಿ ಗುಲಬರ್ಗಾದಿಂದ ಬೇರ್ಪಡಿಸಿದ ನಂತರ ಕರ್ನಾಟಕದ ಪ್ರಮುಖ ಜಿಲ್ಲೆಯಲ್ಲಿ ಒಂದಾಗಿದೆ. ಆರ್.ಗೋಪಾಲ್ ಅವರ ಸಂಪಾದಕೀಯ ಗ್ರಂಥ 'ಇತಿಹಾಸ ಮತ್ತು ಪುರಾತತ್ವ', ಬಸವರಾಜ ಸಬರದ ಅವರ ಕಲಬುರ್ಗಿ ಜಿಲ್ಲಾ ದರ್ಶನ ಇತ್ಯಾದಿ ಕೃತಿಗಳನ್ನು ಅವಲೋಕಿಸಲಾಗಿದೆ.

೨. ಭಾರತದ ಜನಗಣತಿ ವರದಿ ೨೦೧೧ರ ಪ್ರಕಾರ ಗುಲಬರ್ಗಾದ ಜನಸಂಖ್ಯೆಯು ೨೫,೬೪, ೮೯೨ ಆಗಿದೆ. ಈ ಪ್ರದೇಶದಲ್ಲಿ ಸಾಕ್ಷರತೆ ಪ್ರಮಾಣ ಶೇಕಡಾ ೬೫.೬೫%ರಷ್ಟು ಹೊಂದಿದೆ.

೩. ನೈಸರ್ಗಿಕ ಸಂಪನ್ಮೂಲಗಳು, ಖನಿಜ ಸಂಪತ್ತು ಹೊಂದಿದೆ.

೪. ವ್ಯವಸಾಯ ಪದ್ಧತಿ ಹಾಗೂ ಬೆಳೆಗಳ ವಿವರಣೆ ಮತ್ತು ಕೃಷಿಗೆ ಸು. ೫೯,೦೦೦ ಹೆಕ್ಟೇರ್ ಭೂಮಿ ಸಾಗುವಳಿ ವಿವರವಾಗಿ ಎಂ.ಬಿ. ಪಾಟೀಲ ಅವರು ಗುಲಬರ್ಗಾ ಗ್ಯಾಜೆಟಿಯರ್‌ದಲ್ಲಿ ಉಲ್ಲೇಖಿತಗೊಂಡಿದೆ.

೫. ಪೌರಾಣಿಕ ಹಿನ್ನೆಲೆಯಲ್ಲಿ ಗುಲಬರ್ಗಾವು ಸಗರನಾಡು ಎಂದು ಕರೆಯುತ್ತಿದ್ದುದು ಪುರಾಣ ಕಥೆಗಳಲ್ಲಿ ಉಲ್ಲೇಖಿಸಲಾಗಿದೆ.

೬. ಗುಲಬರ್ಗಾವು ಪೂರ್ವ ಇತಿಹಾಸಕಾಲದ ಅವಶೇಷಗಳು ಹೊಂದಿದ ವಸತಿ ನಿವೇಶನಗಳನ್ನು, ಮಡಕೆಚೂರುಗಳು, ಬಳಿಚಕ್ರ ಗ್ರಾಮವು ಮಹತ್ವ ಹೊಂದಿದೆ. ಸೂರ್ಯನಾಥ ಕಾಮತ್, ಕೃತಿ: ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಎಂ.ಬಿ. ಪಾಟೀಲ ಅವರ ಗುಲಬರ್ಗಾ ಗ್ಯಾಜೆಟಿಯರ್ ಈ ಅಧ್ಯಾಯಕ್ಕೆ ಪ್ರಸ್ತುತವಾಗಿದೆ.

೭. ಗುಲಬರ್ಗಾದಲ್ಲಿ ಕೆಲವು ವಿದ್ವಾಂಸರು ನಡೆಸಿದ ಉತ್ಖನನಗಳಿಂದ ಆದಿ ಶಿಲಾಯುಗದ ಅವಶೇಷಗಳು ಜೇವರ್ಗಿ, ಆಂದೋಲ, ರಾಜನಕೋಳೂರು, ಹಗರಟಗಿ ಇತ್ಯಾದಿಗಳಲ್ಲಿ ಪಳೆಯುಳಿಕೆಗಳು ದೊರೆತಿವೆ. ಇದಕ್ಕೆ ಸಂಬಂಧಿಸಿದಂತೆ ಲಕ್ಷ್ಮಣ್ ತೆಲಗಾವಿ (೨೦೦೪) ಅವರ ಮೌರ್ಯರು ಮತ್ತು ಶಾತವಾಹನ, ಅ.ಸುಂದರ್ ಅವರ ಪ್ರಾಚೀನ ಪುರಾತತ್ವ ಇತಿಹಾಸ ಕೃತಿಗಳು ಉಲ್ಲೇಖನಿಯವಾಗಿವೆ.

೮. ಶಾರದಾಪ್ರಸಾದ್ ಎನ್.ಎಸ್.(ಅನು.), ಭಾರತದ ಪ್ರೌಢ ಇತಿಹಾಸ ಕೃತಿಯಲ್ಲಿ ಶಾತವಾಹನರ ಮೂಲ ಮತ್ತು ಬೌದ್ಧ ಧರ್ಮಕ್ಕೆ ನೀಡಿದ ಸಾಂಸ್ಕೃತಿಕ ಕೊಡುಗೆಗಳು ಮತ್ತು ಮೌರ್ಯರ ಕಾಲದಲ್ಲಿ ಗುಲಬರ್ಗಾದ ಸನ್ನತಿಯು ಆಡಳಿತ ಕೇಂದ್ರವಾಗಿತ್ತು ಎಂಬ ವಿಚಾರಗಳು, ಅದಲ್ಲದೆ ಲಕ್ಷ್ಮಣ್ ತೆಲಗಾವಿ ಮತ್ತು ಎಂ.ಬಿ. ಪಾಟೀಲರ ಕೃತಿಗಳು ಇದಕ್ಕೆ ಪೂರಕವಾದ ಮಾಹಿತಿಯನ್ನು ಒದಗಿಸುವವು.

೯. ಬಾದಾಮಿ ಚಾಲುಕ್ಯರು ಗುಲಬರ್ಗಾ ಪ್ರದೇಶವನ್ನು ಅಪರೋಕ್ಷವಾಗಿ ಅಧಿಕಾರವನ್ನು ಹೊಂದಿದವು ಎಂದು ಕಲ್ಯಾಣ ಚಾಲುಕ್ಯರ ಶಾಸನಗಳಿಂದ ತಿಳಿದುಬರುತ್ತದೆ. ಅಲ್ಲದೆ ಬಾದಾಮಿ ಚಾಲುಕ್ಯರ ಮೂಲದ ಬಗ್ಗೆ ವಿಶ್ಲೇಷಣೆಯನ್ನು ಷೇಕ್ ಅಲಿಯವರ 'ಕರ್ನಾಟಕ ಚರಿತ್ರೆ' ಸಂಪುಟ ೪ರಿಂದ ಪಡೆಯಲಾಗಿದೆ.

೧೦. ಗುಲಬರ್ಗಾವನ್ನು ಪೂರ್ಣಪ್ರಮಾಣದಲ್ಲಿ ತಮ್ಮ ಹತೋಟಿಯಲ್ಲಿ ಪಡೆದು ಆಳ್ವಿಕೆಯನ್ನು ಮಾಡಿದ ಸಾಮ್ರಾಜ್ಯಗಳಲ್ಲಿ ಮಳಖೇಡದ ರಾಷ್ಟ್ರಕೂಟರು ಪ್ರಮುಖವಾಗಿದ್ದು, ಈ ರಾಷ್ಟ್ರಕೂಟ ಎಂದರೆ ರಾಷ್ಟ್ರ ಎಂಬ ವಿಭಾಗದ ಮುಖ್ಯಸ್ಥ

ಪ್ರಾಕೃತ ಭಾಷೆಯಲ್ಲಿ 'ರಥಿಕಾ' ಎಂದು ಉಪಯೋಗವಾಗುತ್ತಿತ್ತು. ಬಸವರಾಜ ಎನ್. ಅಕ್ಕಿ (೨೦೦೪) ಅವರ ಕೃತಿಯು ಬಹು ಉಪಯುಕ್ತವಾದುದು.

೧೧. ಪಾಟೀಲ ಎಂ.ಬಿ. (೧೯೯೭) ಗುಲಬರ್ಗಾ ಗ್ಯಾಜೆಟಿಯರ್‌ವು ರಾಷ್ಟ್ರಕೂಟರ ಆಡಳಿತದ ಅರಸರ ಕಾಲಾವಧಿ ಮತ್ತು ಅಂದಿನ ಕಾಲದ ಧಾರ್ಮಿಕ ಸಹಿಷ್ಣುತೆಯ ಅಂಶಗಳನ್ನು ಅವಳವಡಿಸಿಕೊಳ್ಳಲಾಗಿದೆ.

೧೨. ರಾಷ್ಟ್ರಕೂಟ ಸಾಮ್ರಾಜ್ಯದ ಅವನತಿಯ ನಂತರ ಕಲ್ಯಾಣದ ಚಾಲುಕ್ಯರು ಆಳ್ವಿಕೆಯ ಭಾಗವಾಗಿ ಗುಲಬರ್ಗಾ ಚಾಲುಕ್ಯರ ಆಳ್ವಿಕೆಯ ಭಾಗವಾಗಿ ಗುಲಬರ್ಗಾ ಪ್ರದೇಶದ ಹಲವು ಕಡೆಗಳಲ್ಲಿ ದೊರೆತ ಶಾಸನೋಕ್ತ ಆಧಾರಗಳು ಲಭ್ಯ. ಚಿತ್ತಾಪುರ, ಸೇಡಂ, ಜೇವರ್ಗಿ ಮತ್ತು ಮರತೂರ ಶಾಸನಗಳು ಈ ಅಧ್ಯಯನಕ್ಕೆ ಬೆಳಕು ಚೆಲ್ಲುತ್ತವೆ. ಇವರ ತರುವಾಯ ಕಲ್ಯಾಣದ ಕಲಚೂರಿಗಳು ಈ ಭೂ ಭಾಗದಲ್ಲಿ ಅನೇಕ ಶಾಸನಗಳನ್ನು ಹೊರಡಿಸಿದ್ದು, ಅಂದರೆ ಸೇಡಂ ತಾಲೂಕಿನ ಅಡಕಿ ಗ್ರಾಮದ ಶಾಸನ, ಅಫಜಲ್‌ಪುರ ತಾಲೂಕಿನ ಚಿನಮಳ್ಳಿ ಶಾಸನಗಳು ಇದಕ್ಕೆ ಪುಷ್ಟಿಯನ್ನು ನೀಡುತ್ತದೆ.

೧೩. ದೇವಗಿರಿಯ ಸೇವುಣರು ಕಲ್ಯಾಣ ಚಾಲಕ್ಯರ ಮತ್ತು ಕಲಚೂರಿಗಳ ಆಧಿಪತ್ಯ ಕೊನೆಯಾದ ಬಳಿಕ ಅದರ ಏಳ್ಗೆಯ ವಿಚಾರಗಳು ಎಂ.ಬಿ. ಪಾಟೀಲರ ಕೃತಿಯಲ್ಲಿ ತಿಳಿಸಲ್ಪಟ್ಟಿದೆ. ವಿಜಯನಗರ ಬಹಮನಿ ಸಾಮ್ರಾಜ್ಯಗಳ ನಡುವಿನ ರಾಯಚೂರು ದೋ-ಅಬ್ ಪ್ರಾಂತ್ಯಕ್ಕಾಗಿ ನಡೆದ ಸಂಘರ್ಷಗಳು ತಿಳಿದುಬರುತ್ತವೆ. ಕೃಷ್ಣದೇವರಾಯನು ಬಹಮನಿ ಸಾಮ್ರಾಜ್ಯವು ಅಮೀರರ ದೌರ್ಜನ್ಯದಿಂದ ರಕ್ಷಿಸಿ 'ಯವನ ರಾಜ ಪ್ರತಿಷ್ಠಾಪನಾಚಾರ್ಯ' ಎಂಬ ಬಿರುದು ಹೊಂದಿದ ಮಾಹಿತಿಗಳನ್ನು ಪಡೆದುಕೊಳ್ಳಲು ಸಹಾಯಕವಾಗಿದೆ.

೧೪. ಬಹಮನಿ ಸಾಮ್ರಾಜ್ಯದ ಪತನದ ನಂತರ ಬಿಜಾಪುರದ ಆದಿಲ್‌ಷಾಹಿಗಳು ಗುಲಬರ್ಗಾ ಪ್ರದೇಶವನ್ನು ತಮ್ಮ ಅಧಿಕಾರಕ್ಕೆ ತೆಗೆದುಕೊಂಡದ್ದು ಮತ್ತು ಇದರ ಸ್ಥಾಪಕ ಯೂಸುಫ್ ಆದಿಲ್‌ಖಾನನು ವಿಜಯನಗರದೊಂದಿಗಿನ ಯುದ್ಧದಲ್ಲಿ ಮಡಿದ ನಂತರ ಅವನನ್ನು ಶಹಾಪೂರ ತಾಲೂಕಿನ 'ಗೋಗಿ' ಎಂಬಲ್ಲಿ ಸಮಾಧಿ ಮಾಡಲಾಗಿದ್ದ ವಿಷಯವನ್ನು ಗ್ಯಾಜೆಟಿಯರ್‌ದಿಂದ ಪಡೆಯಲಾಗಿದೆ.

೧೫. ಹೈದರಾಬಾದ್ ನಿಜಾಮ ಆಳ್ವಿಕೆಯ ಪೂರ್ವದಲ್ಲಿ ಗುಲಬರ್ಗಾ ಪ್ರದೇಶವು 'ಮರಾಠ'ರ ಅಧೀನದಲ್ಲಿದ್ದು, ನಿಜಾಮನು ಹೈದರಾಬಾದ್ ಸಂಸ್ಥಾನವನ್ನು ಸ್ಥಾಪನೆಗೊಳಿಸಿದ ನಂತರ ಅವರ ಆಳ್ವಿಕೆಗೆ ಒಳಪಟ್ಟಿತ್ತು.

೧೬. ಪ್ರಸ್ತುತ ಅಧ್ಯಯನವು ಹಿಂದೂ-ಮುಸ್ಲಿಂ ಧರ್ಮಗಳ ಸೌಹಾರ್ದತೆಯ ಹಿನ್ನೆಲೆಯನ್ನು ಅಧ್ಯಯನಿಸುವುದಾಗಿದ್ದು, ಕರ್ನಾಟಕದ ಇತರ ಭಾಗಗಳಂತೆ ಉರುಸ್ ಮತ್ತು ಜಾತ್ರೆಗಳನ್ನು ಹಮ್ಮಿಕೊಳ್ಳುವಂತೆ ಗುಲಬರ್ಗಾ ಪ್ರದೇಶದಲ್ಲಿಯೂ ನಡೆಯುತ್ತವೆ. ಜಾತ್ರೆಗಳ ಕುರಿತು ಅನೇಕ ಕೃತಿಗಳು ಜಾನಪದೀಯ ತತ್ವಕಾರರು ರಚಿಸಿದ್ದಾರೆ. ಹಂಪ ನಾಗರಾಜಯ್ಯ ಅವರ (೧೯೮೫) ಕರ್ನಾಟಕ ಜಾತ್ರೆಗಳು, ಶಿವಕುಮಾರಸ್ವಾಮಿ ಸಿ.ಎಸ್. ಅವರ ಸಂಪಾದಕೀಯ ಕರ್ನಾಟಕದ ಜಾತ್ರೆಗಳು (೧೯೮೮) ಮತ್ತು ಇತರ ವಿದ್ವಾಂಸರಾದ ಎಂ.ಎಂ. ಕಲಬುರ್ಗಿ, ಹಿ.ಚಿ. ಬೋರಲಿಂಗಯ್ಯ, ಮಂಜುನಾಥ ಬೇವಿನಕಟ್ಟಿ ಇನ್ನು ಹಲವರು ಜನಪದೀಯ ಸಾಹಿತ್ಯದಲ್ಲಿ ಗ್ರಾಮೀಣ ಜನತೆಯ ಸಾಂಸ್ಕೃತಿಕ ಆಯಾಮಗಳನ್ನು ವಿವರಿಸಿದ್ದಾರೆ. ಜಾತ್ರೆಯ ಪ್ರಯೋಜನೆಗಳ ಬಗ್ಗೆ ರಾಮಚಂದ್ರನ್ ಅವರು ಉಪಯುಕ್ತ ಮಾಹಿತಿ ಒದಗಿಸಿದ್ದಾರೆ.

* * *

# ಅಧ್ಯಾಯ ಎರಡು

## ಖಾಜಾ ಬಂದೇನವಾಜ್ ಉರುಸ್: ವ್ಯಾಪ್ತಿ ಮತ್ತು ಸ್ವರೂಪ


೨.೧. ಪೀಠಿಕೆ

೨.೨. ಖಾಜಾ ಬಂದೇನವಾಜ್ ಹುಟ್ಟು, ಗುಲಬರ್ಗಾಕ್ಕೆ ಆಗಮನ

೨.೩. ಖಾಜಾ ಬಂದೇನವಾಜ್ ಅವರ ಸಿದ್ಧಾಂತಗಳು

೨.೪. ಖಾಜಾ ಬಂದೇನವಾಜ್ ದರ್ಗಾದ ಉರುಸ್ ವಿಧಿ-ವಿಧಾನಗಳು

೨.೫. ಖಾಜಾ ಬಂದೇನವಾಜ್ ಟ್ರಸ್ಟ್ ಸ್ಥಾಪನೆ ಮತ್ತು ಶೈಕ್ಷಣಿಕ ಕೇಂದ್ರಗಳು

೨.೬. ಉಪಸಂಹಾರ

೨.೧. ಪೀಠಿಕೆ

ಇಡೀ ದೇಶದಲ್ಲಿ ಚಿರಪರಿಚಿತನೆಂದು ಹೆಸರುವಾಸಿಯಾದಂತಹ ಚಿಸ್ತಿ ಸೂಫಿ ನಾಸಿರುದ್ದೀನ್‌ನ ಪರಮ ಶಿಷ್ಯನಾಗಿದ್ದ ಬಂದೇನವಾಜ್ ತನ್ನದೇ ಆದಂತಹ ಅನುಯಾಯಿಗಳನ್ನು ರಚಿಸಿಕೊಂಡು ಕರ್ನಾಟಕದ ಉತ್ತರ ಭಾಗದಲ್ಲಿ ಪ್ರಖ್ಯಾತಿಯನ್ನು ಹೊಂದಿದ್ದಾರೆ.

ಬಂದೇನವಾಜ್ ಹಿಂದೂ-ಮುಸ್ಲಿಮರ ವಿಶ್ವಾಸವನ್ನು ಗಳಿಸಿಕೊಂಡಿದ್ದರಿಂದ ಅವರಿಗೆ ಬಹುದೊಡ್ಡ ಶಿಷ್ಯ ಪರಂಪರೆ ಹಾಗೂ ಭಕ್ತ ಸಮೂಹವು ಬೆಳೆಯಲು ಪ್ರಮುಖ ಕಾರಣವಾಯಿತು. ಬಂದೇನವಾಜ್‌ರ ಖ್ಯಾತಿಯು ಎಷ್ಟು ಪ್ರಸಿದ್ಧಿಯನ್ನು ಪಡೆದಿದೆ ಎಂದರೆ, ಉರುಸಿನ ಸಂದರ್ಭದಲ್ಲಿ ಮೂಲೆ ಮೂಲೆಗಳಿಂದ ಸಹಸ್ರಾರು ಜನರು ಆಗಮಿಸಿ ಸಂತನ ದರ್ಶನವನ್ನು ಪಡೆಯುತ್ತಾರೆ. ಹಿಂದೂಗಳು ತಮ್ಮ ಧರ್ಮಕ್ಕೆ ಅನುಸಾರವಾಗಿ ಪೂಜೆ ಮಾಡಿದರೆ ಮುಸ್ಲಿಮರು ಅವರು ಧರ್ಮಕ್ಕೆ ಅನುಸಾರವಾಗಿ ಓದಿಕೆಯನ್ನು ಮಾಡಿಸುವ ಪದ್ಧತಿಯು ಈಗಲೂ ಮುಂದುವರೆಸಿಕೊಂಡು ಬರುತ್ತಿದ್ದಾರೆ. ಉರುಸುಗಳಲ್ಲಿ ನಡೆಯುವ ಕೆಲವು ಸಾಮಾನ್ಯ ಆಚರಣೆಗಳು ಸಕ್ಕರೆ ಅಥವಾ ಮಾಲ್ದಿ, ಹೂವು ಗಂಧ, ಲೋಬಾನ, ಊದಿನಬತ್ತಿ ಇಟ್ಟು 'ಫತ್ತೇ ಹಾ' ಮಾಡಿಸುವುದು. ಸಾಮಾನ್ಯವಾಗಿ ಮುಸ್ಲಿಮೇತರರು ದರ್ಗಾಕ್ಕೆ ಹರಕೆಯನ್ನು ಸಲ್ಲಿಸುವಾಗ ಒದ್ದೆ ಬಟ್ಟೆಯಲ್ಲಿ ದೀಡ್ ನಮಸ್ಕಾರ ಹಾಕುವರು. ಚಾಲ ತೆಗೆಯುವುದು, ದರ್ಗಾ ಸುತ್ತು ಹಾಕುವುದು ಇತರೆ ಪದ್ಧತಿಗಳನ್ನು ಅನುಸರಿಸುವವರು. ಬಂದೇನವಾಜ್‌ರ ಉರುಸ್ ಸಂದರ್ಭದಲ್ಲಿ ಹಿಂದುಗಳು ತಮ್ಮದೇ ಧಾಟಿಯಲ್ಲಿ ಬಂದೇನವಾಜ್ ಕುರಿತು ವಚನಗಳನ್ನು, ತತ್ವ ಪದಗಳನ್ನು, ಗೀತೆಗಳನ್ನು ಹಾಗೂ ಜನಪದ ಹಾಡುಗಳನ್ನು ಹಾಡುವರು. ಮುಸ್ಲಿಂರು ಕವಾಲಿಗಳನ್ನು ಹಾಡುವುದರ ಮೂಲಕ ಗೆಸಂದರಾಜರ ಪವಾಡಗಳನ್ನು ತಿಳಿಸುವರು. ಇಂತಹ ಸಂದರ್ಭದಲ್ಲಿ ಹಿಂದೂ ಮುಸ್ಲಿಂ ಎಂಬ ಭೇದವನ್ನು ಮರೆತು ಎಲ್ಲಾ ಮತಬಾಂಧವರು ಭಾಗವಹಿಸಿ ಜಾತ್ಯತೀತತೆಯನ್ನು ಮೆರೆಯುತ್ತಾರೆ. ಒಟ್ಟಿನಲ್ಲಿ ಹೇಳುವುದಾದರೆ ಬಂದೇನವಾಜ್‌ರಂತಹ ಪ್ರಸಿದ್ಧ ಸೂಫಿಯನ್ನು ಕರ್ನಾಟಕದ ಸೂಫಿ ಸಂತರಲ್ಲಿ ನೋಡುವುದು ಅಸಾಧ್ಯ. ಅವರ ಪವಾಡಗಳನ್ನು ಜನರು ಇಂದಿಗೂ ಸಹ ಮೆಲುಕು ಹಾಕುತ್ತಾರೆ.

ಈ ಅಧ್ಯಾಯದ ಮೊದಲನೆಯ ಭಾಗದಲ್ಲಿ ಬಂದೇನವಾಜ್ ಅವರ ಹುಟ್ಟು, ತಂದೆಯವರ ಪ್ರಭಾವ, ಗೇಸೂದರಾಜ್ ಬಿರುದು, ದೌಲತಾಬಾದ್ ಕಡೆಗೆ ಪ್ರಯಾಣ, ಶೈಕ್ಷಣಿಕ ಜೀವನ, ಬಂದೇನವಾಜ್ ಬಿರುದು ಅವರ ವೈವಾಹಿಕ ಸಂಬಂಧ. ಮತ್ತೆ ದೌಲತಾಬಾದ್‌ನಿಂದ ದೆಹಲಿ ನಗರಕ್ಕೆ ಮರಳಿದ್ದು, ಬಹುಮನಿ ಫೀರೋಜ್ ಶಾ ಸುಲ್ತಾನನ ಆಹ್ವಾನದ ಮೆರೆಗೆ ಗುಲಬರ್ಗಾಕ್ಕೆ ಆಗಮನ ಇತ್ಯಾದಿ ಅಂಶಗಳನ್ನು ಚರ್ಚಿಸಲಾಗಿದೆ.

ಅಧ್ಯಾಯದ ಎರಡನೇ ಭಾಗದಲ್ಲಿ ಬಂದೇನವಾಜ್ ಅವರ ಸಿದ್ಧಾಂತಗಳನ್ನು ಒಳಗೊಂಡ ಷರಿಯತ್, ಫನಾ ಮತ್ತು ಬಖಾ ತಸವುಫ್ ತತ್ವಗಳ ಸಾಧನೆಯನ್ನು ಕುರಿತು ವಿವರಿಸಲು ಪ್ರಯತ್ನಿಸಲಾಗಿದೆ.

ಅಧ್ಯಾಯದ ಮೂರನೇ ಭಾಗದಲ್ಲಿ ಬಂದೇನವಾಜ್ ದರ್ಗಾದ ಉರುಸ್ ಸಂದರ್ಭದ ವಿಧಿ-ವಿಧಾನಗಳು ಅದರಲ್ಲಿ ಅಳವಡಿಸಿಕೊಂಡಿರುವ ರೂಢಿ ಸಂಪ್ರದಾಯಗಳು, ಆಚರಣೆಗಳಾದ ದೀಪ ಹಚ್ಚುವ ಪದ್ಧತಿ, ಉರುಸ್, ರಸಮೆ ಝೀಲಾ ಸಂಧಲ್ ಕಾರ್ಯಕ್ರಮ, ಗಂಧದ ಉತ್ಸವ, ಚಿರಾಘ್ ಬೆಳಗಿಸುವುದು ಮತ್ತು ಕೊನೆಯ ದಿನದಂದು ಜಿಯಾರಾತ್‌ನೊಂದಿಗೆ ಉರುಸ್ ಮುಕ್ತಾಯಗೊಳಿಸುವ ಅಂಶಗಳ ವಿವರಣೆ ನೀಡಲಾಗಿದೆ. ಅಧ್ಯಾಯದ ನಾಲ್ಕನೆಯ ಭಾಗದಲ್ಲಿ ಬಂದೇನವಾಜ್ ಹೆಸರಿನಲ್ಲಿ ಟ್ರಸ್ಟ್ ಸ್ಥಾಪನೆ ಮತ್ತು ಶೈಕ್ಷಣಿಕ ಕೇಂದ್ರಗಳ ವಿವರಣೆ ವಿವರಿಸಲಾಗಿದೆ.

## ಉರುಸು

ಸಂತರು ದೈವಾಧೀನ ಹೊಂದಿದ ದಿನವನ್ನು ಪ್ರತಿವರ್ಷ ಅವರ ಸ್ಮೃತಿಯಲ್ಲಿ ಆಚರಿಸುವ ಪದ್ಧತಿಗೆ ಉರುಸು ಎನ್ನುತ್ತಾರೆ. (ಇಸ್ಲಾಂ ಧರ್ಮದ ಮಹೋನ್ನತ ಗ್ರಂಥವೆಂದೇ ಪ್ರಸಿದ್ಧಿ ಪಡೆದ ಹದೀಸ್‌ದಲ್ಲಿ ಉಲ್ಲೇಖಿಸಿದಂತೆ, ಸಂತರು ಮರಣ ಹೊಂದಿದ ನಂತರ ಅವರ ಅಂತ್ಯಕ್ರಿಯೆ ಸಂಸ್ಕಾರ ಮುಗಿದ ಬಳಿಕ ಗೋರಿಯಲ್ಲಿ ದೇವದೂತರು ಪ್ರತ್ಯಕ್ಷರಾಗಿ ಇವರಿಗೆ ಪ್ರಶ್ನೆಗಳನ್ನು ಕೇಳಿದ ನಂತರ, ದೇವದೂತರ ಪ್ರಶ್ನೆಗಳಿಗೆ ಇವರಿಂದ ಸೂಕ್ತ ಉತ್ತರ ದೊರೆತಾಗ ಸಂತುಷ್ಟರಾದ ದೇವದೂತರು ಈ ರೀತಿ ಹೇಳುತ್ತಾರೆ 'ನಮ್ ಕನೋನ್ ಮಂತಲ್ ಉರಸ್' ಇದರ ಅರ್ಥ, ನೀವುಗಳು ಮದುಮಗಳಂತೆ ಶಾಂತಿಯಿಂದ ಮಲಗಿ, ಅಂದರೆ ಮದುಮಗಳಿಗೆ ಗಂಡನಲ್ಲದೇ ಬೇರೆ ಯಾರೂ ಎಚ್ಚರಗೊಳಿಸುವುದಿಲ್ಲ. ಮೇಲೆ ಉಲ್ಲೇಖಿತ ಉರುಸ್ ಶಬ್ದವೇ ಇಂದು ಉರುಸು ಆಗಿ ಪ್ರಚಲಿತಗೊಂಡಿದೆ (ಚಪ್ಪರಬಂದ್ ೨೦೦೬ : ೩೬).

## ಉರುಸುಗಳ ಉಗಮ

ಉರುಸುಗಳ ಉಗಮ ಮತ್ತು ಆಚರಣೆ ಕುರಿತು ನಿರ್ದಿಷ್ಟವಾಗಿ ಹೇಳುವುದು ಕಷ್ಟಸಾಧ್ಯ. ವಿದ್ವಾಂಸರ ಹೇಳಿಕೆಯ ಪ್ರಕಾರ ಉರುಸು ಸುಮಾರು ಒಂದು ಸಾವಿರ ವರ್ಷದ ಇತಿಹಾಸ ಹೊಂದಿದೆ. ಇದಕ್ಕೆ ಆಧಾರವಾಗಿ ಹಜರತ್ ಸೈಯದ್ ಗೌಸುಲ್ ಆಝುಮ್(ರ) ಇವರ ಉರುಸು, ಸುಮಾರು ೮೫೦ ವರ್ಷಗಳ ದಾಖಲೆ ನೀಡುತ್ತದೆ. ಹಜರತ್ ಖಾಜಾ ಮೈನೂದ್ದೀನ್ ಚಿಸ್ತಿ ಇವರ ಉರುಸು ೭೮೬ ವರ್ಷಗಳ ಇತಿಹಾಸ ನೀಡುವುದಲ್ಲದೇ "ಚಕ್ರವರ್ತಿ ಅಕ್ಬರನ ಕಾಲಕ್ಕೆ ಪ್ರಸಿದ್ಧಿ ಪಡೆಯಿತು." ಹಜರತ್ ಖಾಜಾ ಬಂದೇನವಾಜ್ ಇವರ ಉರುಸು ೫೬೬ ವರ್ಷಗಳ ಇತಿಹಾಸ ಒದಗಿಸುತ್ತದೆ. ಹೀಗೆ ಬಿಜಾಪುರ ಜಿಲ್ಲೆಯಲ್ಲಿಯೂ ಹಲವಾರು ಸೂಫಿ-ಸಂತರ ಉರುಸುಗಳು ಪ್ರಸಿದ್ಧಿ ಪಡೆದಿವೆ. ಇವುಗಳಲ್ಲಿ ಪ್ರಮುಖವಾಗಿ ಹಜರತ್ ಹಾಸಿಮಾ ಪೀಠ ಇತ್ಯಾದಿ ಉರುಸುಗಳು ಜಿಲ್ಲೆಗಳಲ್ಲಿ ಅನೇಕ ಕಡೆ ಆಚರಿಸುವುದನ್ನು ಕಾಣುತ್ತೇವೆ. ಈ ರೀತಿಯಾಗಿ ಉರುಸುಗಳು ಪ್ರಾಗೈತಿಹಾಸಿಕ ಹಿನ್ನೆಲೆಯೊಂದಿಗೆ ಬೆಳೆದು ಜಾತ್ರೆಗಳ ಸ್ವರೂಪವನ್ನು ಪಡೆದುಕೊಂಡಿದೆ (ಚಪ್ಪರಬಂದ್ ೨೦೦೬: ೩೬-೩೭).[೨]

## ೨.೨. ಖಾಜಾ ಬಂದೇನವಾಜ್ ಹುಟ್ಟು ಮತ್ತು ಗುಲಬರ್ಗಾಕ್ಕೆ ಆಗಮನ

**ಪೀಠಿಕೆ**

ಖಾಜಾ ಬಂದೇನವಾಜ್‌ರು ಮಧ್ಯಕಾಲೀನ ಭಕ್ತಿ ಚಳವಳಿಯ ಕಾಲಕ್ಕೆ ಇಸ್ಲಾಂ ಧರ್ಮದ ಕೆಲವು ಅತ್ಯುತ್ತಮ ಸಂದೇಶಗಳನ್ನು ಜನರಿಗೆ ಬೋಧಿಸುತ್ತ, ಇಡೀ ಭಾರತದ ಮತ್ತು ಇತರ ಭೂ ಪ್ರದೇಶಗಳನ್ನು ಸಂಚರಿಸಿ ತಮ್ಮ ಆಧ್ಯಾತ್ಮದ ಜ್ಞಾನದಿಂದ ಚರಿತ್ರೆಯಲ್ಲಿ ಪ್ರಮುಖ ಸ್ಥಾನವನ್ನು ಹೊಂದಿದ್ದಾರೆ.

**೧. ಖಾಜಾ ಬಂದೇನವಾಜ್ ಹುಟ್ಟು**

ಉತ್ತರ ಭಾರತದ ಸಂಕೀರ್ಣ ಸಮಯದಲ್ಲಿ ದಿವ್ಯ ಚೇತನವೊಂದರ ಆಗಮನಕ್ಕೆ ಜನ ನಿರೀಕ್ಷೆಯಲ್ಲಿದ್ದುದು ತಿಳಿದುಬರುತ್ತದೆ. ಆ ಮೊರೆ ಅಲ್ಲಾನನ್ನು ಹೋಗಿ ತಲುಪಿದೆಯೇನೋ ಎಂಬಂತೆ ಸಯ್ಯದ್ ಯುಸೂಫ್ ಹುಸೇನಿ ಮತ್ತು ಸಯಿದಾ ಬೀಬಿರಾಣಿ ಅವರ ಮಗನಾಗಿ ಹಿಜರಿ ಸಂವತ್ಸರ ೭೨೧, ರಜಬ್ ತಿಂಗಳ ನಾಲ್ಕನೆಯ ದಿನ ಅಂದರೆ ಕ್ರಿ.ಶ.೧೩೨೧ ಜುಲೈ ೩೧ರಂದು ಸಯ್ಯದ್ ಮಹ್ಮದ್ ಹುಸೇನಿ(ಖಾಜಾ ಬಂದೇನವಾಜ್) ಅವರು ದಿಲ್ಲಿಯಲ್ಲಿ ಜನಿಸಿದರು. ಹೆಸರಾಂತ ಸೂಫಿಸಂತರ ಮನೆತನ ಇವರದಾಗಿತ್ತು. ಇವರ ತಂದೆಯವರೂ ಧರ್ಮಾತ್ಮರಾಗಿದ್ದರು. ಇವರನ್ನು ಜನರು ಪ್ರೀತಿಯಿಂದ 'ಷಾಹ್ ರಾಜೂ ಖತಾಲ್', 'ಸಯ್ಯದ್ ರಾಜ್' ಎಂದೂ ಕರೆಯುತ್ತಿದ್ದರಂತೆ (ದಂಡೆ ೨೦೦೮ : ೨).[೩]

ಹಜರತ್ ಖಾಜಾ ಬಂದೇನವಾಜರು ಹಜರತ್ ಇಮಾಮ್ ಜೈನುಲ್ ಆಬಿದೀನ್‌ರ ವಂಶಸ್ಥರು. ಈ ವಂಶದಲ್ಲಿನ ಸುಮಾರು ೨೨ ಪ್ರಸಿದ್ಧ ಸೂಫಿಸಂತರ ವಂಶವೃಕ್ಷವು ಖಲ್ಫಾಯೆ ರಾಷದೀನ್‌ನ ಅಂತಿಮ ಖಲೀಫಾ ಹಜರತ್ ಅಲಿ ರಹ್ಮತುಲ್ಲಾ ಆಲೈಹಿಯವರ ಮಗ ಹಜರತ್ ಹುಸೈನ್ ರಹ್ಮತುಲ್ಲಾರವರನ್ನು ಸಂಬಂಧಿಸುತ್ತಾ, ಹಜರತ್ ಮುಹಮ್ಮದ್ ಪೈಗಂಬರರಲ್ಲಿಗೆ ತಲುಪುತ್ತದೆ. ಇವರು ಹುಸೇನಿ ಪರಂಪರೆಯಲ್ಲಿ ಪ್ರಖ್ಯಾತರೆನಿಸಿಕೊಂಡಿದ್ದಾರೆ. ಇವರನ್ನು 'ಮುಷಾಹಿರ್ ಆವ್‌ಲಿಯಾ' ಎಂದು ಕರೆಯುತ್ತಾರೆ (ಹಮೀದ್ ೧೯೯೪: ೬-೭).[೪]

**೨. ಗೇಸೂದರಾಜ್ ಬಿರುದು**

'ಗೇಸೂ' ಎಂದರೆ ತಲೆಯ ಕೂದಲು ಎಂದರ್ಥ. ದೆಹಲಿಯ ಹಜರತ್ ಷಾಹ್‌ಹಖ್ ಮುಹದ್ದಸರವರು ಹಜರತ್ ಖಾಜಾ ಬಂದೇನವಾಜನವರ ತಲೆಗೂದಲಿನ ಬಗ್ಗೆ ಹೀಗೆಂದಿದ್ದಾರೆ.

ಹಜರತ್ ಖಾಜಾ ಸಾಹೇಬರ ತಲೆಗೂದಲು ಅವರ ಮೊಳಕಾಲಿನವರೆಗೂ ಬಹಳ ಉದ್ದವಾಗಿ ಬೆಳೆದಿದ್ದವು. ದೆಹಲಿಯಲ್ಲಿ ಒಮ್ಮೆ ತಮ್ಮ ಶೇಖ್(ಗುರು, ಪೀರ್ ಅಥವಾ ಮುರ್ಷದ್) ಹಜರತ್ ಖಾಜಾ ನಸೀರುದ್ದೀನ್ ಚಿರಾಘ್ ದೆಹಲಿಯವರು ಪಲ್ಲಕ್ಕಿಯನ್ನು ತಮ್ಮ ಹೆಗಲ ಮೇಲೆ ಹೊತ್ತು ಹೋಗುತ್ತಿದ್ದರು. ದಾರಿಯಲ್ಲಿ ಅವರ ಕೆಲವು ಕೂದಲುಗಳು ತಮ್ಮ ಗುರುಗಳ ಪಲ್ಲಕ್ಕಿಯ ಒಂದು ಭಾಗದಲ್ಲಿ ಬಿಡಿಸಲಾಗದಂತೆ ಸಿಕ್ಕಿಹಾಕಿಕೊಂಡವು. ಅವುಗಳನ್ನು ಬಿಡಿಸಲು ಹೆಚ್ಚು ಪ್ರಯತ್ನ ಪಟ್ಟರೆ ಗುರುಗಳ ಸವಾರಿಗೆ ಧಕ್ಕೆ

ಉಂಟಾಗಬಹುದೆಂಬ ಭೀತಿ ಹಾಗೂ ಗುರುಭಕ್ತಿಯ ಗೌರವದಿಂದಾಗಿ ಪಲ್ಲಕ್ಕಿಯನ್ನು ಹೊತ್ತು ಹೋಗುತ್ತಲೇ ಇದ್ದರು. ಆ ಪಲ್ಲಕ್ಕಿಯನ್ನು ಹೊತ್ತ ಇತರೆ ಶಿಷ್ಯರಿಂದ ಹೇಗೊ ಗುರುಗಳಿಗೆ ಇವರ ನೋವು ತಿಳಿಯಿತು. ಗುರುಗಳು ಶಿಷ್ಯನ ಗುರುಭಕ್ತಿಯಿಂದ ಬಹಳ ಸಂತೋಷಪಟ್ಟು ತಮ್ಮ ಬಾಯಿಯಿಂದ ಫಾರಸೀ ಭಾಷೆಯಲ್ಲಿ ಈ ಉದ್ಗಾರವನ್ನು ಶೇರ್ ಛಂದಸ್ಸಿನಲ್ಲಿ ಹೀಗೆ ತೆಗೆದರು.

ಹರ್‌ಕೆ ಮರೀದ್ ಸಯ್ಯದ್ ಗೇಸೂದರಾಜ್‌ಷುದ್,

ವಲ್ಲಾಹ್ ಖಲಾಫೇ ನೀಸ್ತ್‌ಕೆ ವೊ ಇಷ್ಕಬಾಜ್‌ಫುದ್.

ಅಂದಿನಿಂದ ಇವರ ಹೆಸರಿನ ಮುಂದೆ ಗೇಸೂದರಾಜ್ ಎಂಬ ಬಿರುದು ಸೇರಿಕೊಂಡಿತು (ಹಮೀದ್ ೧೯೯೪: ೭-೮).[೫]

೩. ತಂದೆಯವರ ವ್ಯಕ್ತಿತ್ವದ ಪ್ರಭಾವ

ತಂದೆಯವರ ಗಂಭೀರವಾದ ವ್ಯಕ್ತಿತ್ವ, ಧಾರ್ಮಿಕ ಚಿಂತನೆಗಳು, ಆಚರಣೆಗಳು ಸಯ್ಯದ್ ಮಹ್ಮದ್ ಹುಸೇನಿ ಅವರ ಎಳೆಯ ಮನಸ್ಸಿನ ಮೇಲೆ ಗಾಢ ಪರಿಣಾಮವನ್ನು ಉಂಟು ಮಾಡಿದ್ದವು. ಲೌಕಿಕ ಬಂಧನದ ತಂದೆಯವರನ್ನು ಕಳೆದುಕೊಂಡಿದ್ದರೂ ಅಲೌಕಿಕ ಸಿದ್ಧಿಯನ್ನು ಸಂಪಾದಿಸಿಕೊಂಡ ತಂದೆಯವರ ಚಿಂತನೆಗಳು ಮಾತ್ರ ಸದಾ ಕಿವಿಯಲ್ಲಿ ಅನುರಣಿಸುತ್ತಿದ್ದವು. ತಮ್ಮ ತಂದೆಯವರು, ತಮ್ಮ ಹತ್ತಿರ ಬಂದ ಜನರಿಗೆ ಸಾಂತ್ವನ ನೀಡುವುದಷ್ಟೇ ಅಲ್ಲ, ಅವರಿಗೆ ಹಲವಾರು ಪ್ರಶ್ನೆಗಳನ್ನು ಹಾಕಿಕೊಳ್ಳಲು ಹೇಳುತ್ತಿದ್ದರು. ಪ್ರಶ್ನೆಗೆ ಉತ್ತರ ಸಿಗುವವರೆಗೆ ಪ್ರಯತ್ನ ಬಿಡಬಾರದು. ಈ ಪ್ರಯತ್ನದಿಂದ ಕಾಯಕಜೀವಿಗಳಾಗುತ್ತಾರೆಯೇ ಹೊರತು ಸೋಮಾರಿಗಳಲ್ಲ ಎಂದು ಹೇಳುತ್ತಿದ್ದರು. ಬರೀ ಉಪದೇಶ ಯಾರ ಮೇಲೂ ಪರಿಣಾಮ ಬೀರಲಾರದು. ಆದರೆ ನಡೆ-ನುಡಿ ಒಂದಾದವರ ಮಾತುಗಳು ಎಂಥವರ ಮನಸ್ಸನ್ನೂ ಪರಿವರ್ತಿಸುವ ಅಯಸ್ಕಾಂತತೆಯನ್ನು ಪಡೆದಿರುತ್ತವೆ. ಸಯ್ಯದ್ ಯುಸೂಫ್ ಹುಸೇನಿ ಅವರು ಜನರಿಗೆ ಹೀಗೆ ಹೇಳುತ್ತಿದ್ದರು.

೧. ಎಲ್ಲಕ್ಕೂ ಆಸೆಯೇ ಮೂಲ. ಆಸೆಪಟ್ಟುದನ್ನು ಅನುಭವಿಸುವ ಅವಕಾಶ ಸಿಕ್ಕರೆ ಸಂತೋಷವಾಗುತ್ತದೆ. ಆಸೆಯ ಹಿಂದೆ ಪ್ರಯತ್ನ ಇದ್ದಾಗ ಮಾತ್ರ ಆನಂದ ಸುಲಭವಾಗಿ ಸಿಗುತ್ತದೆ. ಆಸೆ ಪ್ರಯತ್ನವಿಲ್ಲದೆ ಈಡೇರದೇ ಹೋಗಬಹುದು. ಆಗ ಅಸಮಾಧಾನ ಪಡಬೇಕಾಗಿಲ್ಲ. ಆದರೆ ಹಾಗಾಗುವುದೇ ಇಲ್ಲ. ಆಶಿಸಿದ್ದು ಸಿಗದೇ ಹೋದಾಗ ಅಸಂತೃಪ್ತಿಯಿಂದ ಮನುಷ್ಯ ಹತಾಶನಾಗುತ್ತಾನೆ. ಕಾರಣ ಇಂಥ ಆಸೆಯಿಂದ ಮೊದಲು ದೂರ ಉಳಿಯಬೇಕು ಎಂದು ಅವರು ಎಚ್ಚರಿಸುತ್ತಾರೆ.

೨. ಮೊದಲು ನಾವೆಲ್ಲ ನಮ್ಮಲ್ಲಿಯೇ ಪ್ರಶ್ನೆಗಳನ್ನು ಹಾಕಿಕೊಳ್ಳಬೇಕು. ಮೊದಲನೆಯದಾಗಿ ತಾನು ಈ ಭೂಮಿಗೆ ಏಕೆ ಬಂದೆ? ಎಂಬ ಬಗ್ಗೆ ಚಿಂತನೆ ನಡೆಸಬೇಕು. ಈ ವಿಷಯವಾಗಿ ನಮಗೆ ಏನೇನು ಕಾರಣಗಳು ಎದುರಾಗುತ್ತವೆಯೋ ಅವನ್ನೆಲ್ಲ ಒಂದೆಡೆ ಪಟ್ಟಿ ಮಾಡಿಕೊಂಡು, ತನ್ನ ಸ್ವಭಾವಕ್ಕೆ ಹೊಂದಿಕೆಯಾಗುವ ಉದ್ದೇಶವನ್ನು ಅಲ್ಲಿ ಒಪ್ಪಿಕೊಳ್ಳಬಹುದು. ಆಗ ಎಚ್ಚರಿಕೆ ಬೇಕು. ಭೂಮಿಗೆ

ಬಂದದ್ದಕ್ಕೂ ಸಾರ್ಥಕ ಜೀವನ ನಡೆಸಬೇಕೆಂಬ ಆಸೆಯನ್ನು ಇಟ್ಟುಕೊಂಡರೂ ಸಾಕು. ಯಾರ ಬದುಕಿಗೂ ಅಪಾಯವಾಗದಂತೆ ನಮ್ಮ ಜೀವನ ರೂಪಗೊಳ್ಳಬೇಕಲ್ಲವೆ?

೩. ಜೀವನ ಸುಂದರವಾಗಿರಬೇಕೆಂದರೆ ದೈಹಿಕ ಭೋಗವೇ ಅಲ್ಲಿ ಮುಖ್ಯ ಆಗಬಾರದು. ಜೀವನ ಬರೀ ಸಾಂಸಾರಿಕವಾಗಿದ್ದರೆ ಸಾಲದು. ಅದರ ಜೊತೆ ಅಲೌಕಿಕ ಸಂಸಾರ ಸಂಬಂಧಗಳ ಪಾವಿತ್ರ್ಯತೆಯ ಅರಿವೂ ನಮಗೆಲ್ಲ ಇರಬೇಕಾಗುತ್ತದೆ.

೪. ಸಂಸಾರ ಸಾಗರ ಉರದುದ್ದ ಎಂಬ ಭೀತಿ ಇರಬಾರದು. ಸಂಸಾರದ ಸೋಲನ್ನು ಯೋಚಿಸುವುದಕ್ಕಿಂತ, ಸಕಾರಾತ್ಮಕವಾಗಿ ಆಲೋಚಿಸುವ ವಿಧಾನವನ್ನು ನಮ್ಮದಾಗಿಸಿಕೊಳ್ಳಬೇಕು. ಉಳಿದೆಲ್ಲರಿಗಿಂತ ನಾನು ಭಿನ್ನವಾಗಿ ಕಾಣಿಸಬೇಕು, ಸನ್ಮಾರ್ಗದಲ್ಲಿ ನಡೆಯಬೇಕೆಂಬ ಛಲವಿರಬೇಕು.

೫. ಈ ಮರ್ತ್ಯದ ಜನನ ಪವಿತ್ರವಾದುದು. ದುರ್ಲಭವಾದುದು. ಇಂಥ ಅಪರೂಪದ ಜನ್ಮವೊಂದು ನನಗೆ ಸಿಕ್ಕಿದೆಯಲ್ಲ ಎಂಬ ವಿವೇಕವಿರಬೇಕು. ಬರೀ ವಿವೇಕವಿದ್ದರೆ ಸಾಲದು. ನನ್ನ ವಿವೇಕದಿಂದ ನಾನು ಸಂಪಾದಿಸಿಕೊಂಡ ಜ್ಞಾನವನ್ನು ಎಲ್ಲರ ಜೊತೆ ಹಂಚಿಕೊಳ್ಳಬೇಕು. ನನಗಾಗಿ ಮಾತ್ರ ಬದುಕುತ್ತಿರುವೆ ಎಂಬ ಸ್ವಾರ್ಥ ಹೋಗಿ ಸಮಷ್ಟಿ ಹಿತಚಿಂತನೆಯ ತುಡಿತ ಹೆಚ್ಚಾಗಬೇಕು, ನನಗಾಗಿ ಬದುಕದೇ ಎಲ್ಲರಿಗಾಗಿ ಬದುಕಿದಾಗ ಸಿಗುವ ತೃಪ್ತಿ ಆನಂದವೇ ಬೇರೆ.

೬. ಪ್ರತಿಕೂಲ ಪರಿಸ್ಥಿತಿ ಎದುರಾದಾಗಲೂ ಕೂಡ ಧೈರ್ಯಗೆಡಬಾರದು. ಆತಂಕಕ್ಕೆ ಒಳಗಾಗಬಾರದು. ಉದ್ರೇಕಕ್ಕೆ ಗುರಿಯಾಗಬಾರದು. ತಾಳ್ಮೆ ಸಮಾಧಾನ ಮೂಲಮಂತ್ರವಾಗಬೇಕು. ಆಗ ವ್ಯಕ್ತಿ ಧೃತಿಗೆಡಲಾರ. ಈ ನಿಶ್ಚಲತೆಯನ್ನು ಧ್ಯಾನದಿಂದ ಮಾತ್ರ ಪಡೆದುಕೊಳ್ಳಲು ಸಾಧ್ಯ. ಧ್ಯಾನಸ್ಥ ಸ್ಥಿತಿಯನ್ನು ಅನುಭವಿಸುವುದೇ ಒಂದು ಹೊಸ ಅನುಭವ.

ಇನ್ನೂ ಹಲವಾರು ವಿಚಾರಗಳನ್ನು ಸಯ್ಯದ್ ಯುಸೂಫ್ ಹುಸೇನಿ ಅವರು ಸಾರ್ವಜನಿಕರೆದುರು ಮನಬಿಚ್ಚಿ ಮಾತನಾಡುತ್ತಿದ್ದರು. ಇವೆಲ್ಲ ವಿಶೇಷತೆಗಳಿಂದಾಗಿ ಇವರು ಅಂದು ಸಮಾಜದ ಗಣ್ಯರ ಸಾಲಿನಲ್ಲಿದ್ದರು. ಸೂಫಿ ಪರಂಪರೆ ಆದುದರಿಂದ ಇನ್ನೂ ಹೆಚ್ಚಿನ ಪ್ರಾಶಸ್ತ್ಯ ಇವರ ಕುಟುಂಬಕ್ಕೆ ಇತ್ತು. ಇಂಥ ಪರಿಸರದಲ್ಲಿ ಸಯ್ಯದ್ ಮಹ್ಮದ್ ಹುಸೇನಿ ಅವರು ಬೆಳೆಯುತ್ತಿದ್ದರು. ತಂದೆಯ ಮರಣಾನಂತರ ತಾಯಿಯ ಜವಾಬ್ದಾರಿ ಹೆಚ್ಚಾಯಿತು (ದಂಡೆ ೨೦೦೮: ೫-೮).[೬]

## ೪. ದಕ್ಷಿಣದತ್ತ(ದೌಲತಾಬಾದ್) ನತ್ತ ಪ್ರಯಾಣ

ಹಿಜಿರಾ ಶಕೆ ೭೨೮-ರಂಜಾನ್ ತಿಂಗಳ ೨೦ನೇ ತಾರೀಕಿನಂದು ಇವರ ಪರಿವಾರವು ದೆಹಲಿಯನ್ನು ತ್ಯಜಿಸಿ ದಕ್ಷಿಣ ಭಾರತದತ್ತ ಪ್ರಯಾಣವನ್ನು ಆರಂಭಿಸಿದರು. ಸುಮಾರು ಮೂರು ತಿಂಗಳ ಪ್ರಯಾಣದ ನಂತರ ಹಿಜರ ಶಕೆ ಮೊಹರಂ ೧೭ನೇ ತಾರೀಕು ತಮ್ಮ ಪರಿವಾರ ಸಮೇತ ದೌಲತಾಬಾದಿಗೆ ಬಂದಿಳಿದರು. ಅಲ್ಲಿಯ ಕೋಟೆಯ ಉತ್ತರ ಭಾಗದಲ್ಲಿ ಒಂದು ಗುಡ್ಡದ ಹತ್ತಿರ ತಮ್ಮ ನಿವಾಸವನ್ನು ಸ್ಥಾಪಿಸಿಕೊಂಡರು. ಆ ಭಾಗವನ್ನು 'ಖುಲ್ದಾಬಾದ್' ಎಂದೂ ಕರೆಯುತ್ತಿದ್ದರು.

ಹಜರತ್ ಖಾಜಾ ಸಾಹೇಬರ ತಂದೆಯವರೂ ಒಬ್ಬ ಸಂತರಾಗಿದ್ದರು ಎಂದು ನಾವು ಹಿಂದೆ ತಿಳಿದಿದ್ದೇವೆ. ತಂದೆಯ ಭಾಗ್ಯವನ್ನು ಹಜರತ್ ಖಾಜಾ ಸಾಹೇಬರು ಬಹಳ ದಿನಗಳ ತನಕ ಪಡೆಯುವ ಅದೃಷ್ಟಶಾಲಿಗಳಾಗಿರಲಿಲ್ಲ. ಹಿಜಿರಾ ಶಕೆ ೭೩೧ ಶವ್ವಾಲ್ ತಿಂಗಳ ೫ನೇ ತಾರೀಕಿನಂದು ಅಂದರೆ ಕ್ರಿ.ಶ.೧೩೩೦ರಲ್ಲಿ ತಂದೆ ಹಜರತ್ ಸಯ್ಯದ್ ರಾಜ ಸಾಹೇಬರು ಅಲ್ಲಾಹನಲ್ಲಿ ವಿಸಾಲ(ಐಕ್ಯ)ತ್ವವನ್ನು ಪಡೆದರು. ಅವರನ್ನು ಖುಲ್ದಾಬಾದಿನ ತಮ್ಮ ಮನೆಯ ಅಂಗಳದಲ್ಲಿಯೇ ಸಕಲ ಧಾರ್ಮಿಕ ಸಂಸ್ಕಾರದೊಂದಿಗೆ ಅನುಭವಿಗಳಾದ ಸಯ್ಯದ್ ಯುಸೂಫ್ ಹುಸೇನಿ ಅವರ ದೇಹವನ್ನು ದಫನ್ ಮಾಡಲಾಯಿತು. ಅಂದಿಗೆ ಹಜರತ್ ಖಾಜಾ ಸಾಹೇಬರ ವಯಸ್ಸು ೧೦ ವರ್ಷ ಮೂರು ತಿಂಗಳು ಒಂದು ದಿನವಾಗಿತ್ತು (ಹಮೀದ್ ೧೯೯೪: ೬).[2]

## ೫. ಶೈಕ್ಷಣಿಕ ಜೀವನ

ಖುಲ್ದಾಬಾದಿನ ತಮ್ಮ ಮನೆಯಲ್ಲಿಯೇ ಇವರ ಶೈಕ್ಷಣಿಕ ದಿನಗಳು ಆರಂಭಗೊಂಡಿದ್ದವು. ಪ್ರಾರಂಭಿಕ ಶಿಕ್ಷಣ ತಮ್ಮ ಅಜ್ಜನವರ ಮತ್ತು ತಂದೆಯವರ ಎದುರಿನಲ್ಲೇ ನಡೆದಿತ್ತು. ಚಿಕ್ಕಂದಿನಲ್ಲಿಯೇ ಕುರಾನ್ ಪಠಣವನ್ನು ಆರಂಭಿಸಿ ಸಂಪೂರ್ಣವಾಗಿ ಕಂಠಪಾಠ ಮಾಡಿ 'ಹಾಫಿಜ್-ಎ-ಕುರಾನ್'ರೆನಿಸಿಕೊಂಡರು. ಸೂಫೀ ಪರಂಪರೆಯಲ್ಲಿ ಯೋಗ್ಯ ಗುರುಗಳಿಂದ ದೀಕ್ಷೆಯನ್ನು ಪಡೆಯುವುದು ಕಡ್ಡಾಯವಿದೆ. ಇವರ ಪ್ರಕಾರ ಇವರು ತಮ್ಮ ಅಜ್ಜನವರಾದ ಸೂಫಿಗುರು ಹಜರತ್ ಸುಲ್ತಾನುಲ್ ಮಶಾಯಿಖ್ ಅವರಿಂದಲೂ ಹಾಗೂ ತಮ್ಮ ತಂದೆಯವರಿಂದಲೂ ದೀಕ್ಷೆ ಪಡೆದರು. ಈ ಸಂದರ್ಭದಲ್ಲಿ ದೆಹಲಿಯಲ್ಲಿದ್ದ ಹಜರತ್ ನಿಜಾಮುದ್ದೀನ್ ಅವ್‌ಲಿಯಾ ಮತ್ತು ಹಜರತ್ ಖಾಜಾ ನಸಿರುದ್ದೀನ್ ಚಿರಾಘ್ ಅವರ ಕೀರ್ತಿಯು ದೇಶದಲ್ಲೆಲ್ಲಾ ಹರಡಿತ್ತು. ಇವರ ಬಗ್ಗೆ ಹಜರತ್ ಖಾಜಾ ಸಾಹೇಬರಿಗೆ ಅಪಾರವಾದ ಗೌರವ ಭಾವನೆಗಳು ಬೆಳೆದು ಇವರನ್ನು ನೋಡುವ ಹಂಬಲವೂ ದಿನೇ ದಿನೇ ಬೆಳೆಯತೊಡಗಿತ್ತು. ಬಾಲಕ ಹಜರತ್ ಖಾಜಾ ಸಾಹೇಬರ ವಯಸ್ಸು ಇನ್ನೂ ಚಿಕ್ಕದಾದುದರಿಂದ ಹಾಗೂ ತಾಯಿಯ ಮಮತೆ ಇವರ ಮೇಲೆ ಅಪಾರವಾದುದ್ದರಿಂದ ಇವರನ್ನು ದೆಹಲಿಗೆ ಕಳುಹಿಸಲು ಸಮ್ಮತಿಸಲಿಲ್ಲ.

ಖಾಜಾ ಸಾಹೇಬರ ಸೋದರಮಾವ ಮುಲ್ಕುಲ್ ಉಮ್ರಾ ಜನಾಬ್ ಸಯ್ಯದ್ ಇಬ್ರಾಹಿಂ ಮಸ್ತುಫಿಯವರು ಅಂದಿನ ದಿನಗಳಲ್ಲಿ ದೌಲತಾಬಾದಿನ ಗವರ್ನರ್ ಆಗಿದ್ದರು. ಇವರ ತಾಯಿಯವರಿಗೂ ಗೌರ್ನರ್ ಸಾಹೇಬರಿಗೂ ಕಾರಣಾಂತರದಿಂದ ಮನಸ್ತಾಪ ಉಂಟಾಗಿ ದಿನೇ ದಿನೇ ಅದು ಅಸಹನೀಯವಾಗಿ ಬೆಳೆಯಿತು. ಇದನ್ನು ಸಹಿಸಲಾರದ ಹಜರತ್ ಖಾಜಾ ಸಾಹೇಬರ ತಾಯಿಯವರು ತಮ್ಮ ಹಿರಿಯ ಮಗನಾದ ಹ.ಸಯ್ಯದ್ ಜೊತೆಗೂಡಿ ದೆಹಲಿಗೆ ವಾಪಸ್ ಬಂದು ನೆಲೆಸಿದರು. ಹಿಜರಿ-೭೩೬ ರಜಬ್ ತಿಂಗಳ ೪ನೇ ತಾರೀಕಿನಂದು ದೆಹಲಿಯನ್ನು ತಲುಪಿದರು. ಅಂದಿಗೆ ಹಜರತ್ ಖಾಜಾ ಸಾಹೇಬರ ವಯಸ್ಸು ೧೫ ವರ್ಷಗಳಾಗಿದ್ದವು. ದೆಹಲಿಯನ್ನು ತಲುಪಿದ ಮೂರನೇ ದಿನವೇ ಸುಲ್ತಾನ್ ಖುತುಬುದ್ದೀನ್ ಐಬಕ್‌ನು ಕಟ್ಟಿಸಿದ ಜಾಮಾ ಮಸೀದಿಗೆ ಪ್ರಾರ್ಥನೆಯನ್ನು ಸಲ್ಲಿಸಲು ಹಜರತ್ ಖಾಜಾ ಸಾಹೇಬರು ಹೋದರು. ದೆಹಲಿಯ ಅಂದಿನ ಪ್ರಸಿದ್ಧ ಗುರು (ಪೀರ್)ಗಳಾದ ಹಜರತ್ ಖಾಜಾ ನಸೀರುದ್ದೀನ್ ಚಿರಾಘ್ ಅವರು ಅದೇ ಮಸೀದಿಗೆ

ಪ್ರಾರ್ಥನೆಗೆ ಪ್ರತಿದಿನ ಬರುವರೆಂದು ಅವರಿಗೆ ಗೊತ್ತಿತ್ತು. ಅವರನ್ನು ಕಾಣುವ ಹಂಬಲ ಬಹಳ ದಿನಗಳಿಂದ ಕಾಡುತ್ತಿತ್ತು. ಅವರ ಉದ್ದೇಶವೂ ಅಂದು ಸಫಲವಾಯಿತು (ಹಮೀದ್ ೧೯೯೪: ೧೦-೧೧).[೮]

ಗುರುಗಳ ದೃಷ್ಟಿಯು ಹಜರತ್ ಖಾಜಾ ಸಾಹೇಬರ ಮೇಲೆ ಬಿತ್ತು. ಪ್ರಥಮ ನೋಟದಲ್ಲೇ ಪರಸ್ಪರ ಆಕರ್ಷಿತಗೊಂಡರು. ಗುರುಗಳ ಕರುಣಾದೃಷ್ಟಿ, ಕೃಪಾದೃಷ್ಟಿ ಸೈಯದ್ ಹಜರತ್ ಖಾಜಾ ಬಂದೇನವಾಜರ ಮೇಲೆ ಬಿತ್ತು. ಒಬ್ಬರನ್ನೊಬ್ಬರು ಆಲಿಂಗಿಸಿಕೊಂಡರು. ಮನೆಗೆ ಬಂದು ಕಾಣಲು ಶಿಷ್ಯನಿಗೆ ಹೇಳಿದರು. ತನ್ನ ಅಣ್ಣನಾದ ಹಜರತ್ ಸಯ್ಯದ್ ಹುಸೇನರೊಂದಿಗೆ ಗುರುಗಳ ಮನೆ ತಲುಪಿದರು. ಗುರುಗಳು ಶಿಷ್ಯನನ್ನು ಪರೀಕ್ಷಿಸಿದರು. ಅದರಲ್ಲಿ ತೇರ್ಗಡೆಯಾದರು, ಸಂತೋಷಗೊಂಡರು. ಒಂದನೇ ಮಾರ್ಚ್ ೧೩೩೬ರಲ್ಲಿ ನಸೀರುದ್ದೀನ್ ಚಿರಾಘ್ ಅವರಲ್ಲಿ ಶಿಷ್ಯತ್ವ ಪಡೆದರು (ಕರದಳ್ಳಿ ೨೦೦೫: ೧೬-೧೭).[೯]

ಸುಯೋಗ್ಯ ಗುರುಗಳ ಸಾನ್ನಿಧ್ಯದಲ್ಲಿ ಹಜರತ್ ಖಾಜಾ ಸಾಹೇಬರ ಶಿಕ್ಷಣ ಮುಂದುವರೆಯಿತು. ಅಂದಿನ ಸಾಮಾಜಿಕ, ಧಾರ್ಮಿಕ ವಿಚಾರಗಳಾದ ಬಹಿರಂಗ ಶಿಕ್ಷಣದೊಂದಿಗೆ ಸೂಫಿ ಪರಂಪರಾಗತ ಅಂತರಂಗ(ಗುಪ್ತ) ವಿದ್ಯೆಯತ್ತ ಸಾಗಲಾರಂಭಿಸಿದರು. ಬಹಳ ಶ್ರದ್ಧಾ ಭಕ್ತಿಗಳಿಂದ ಗುರುಗಳ ಸೇವೆಯಲ್ಲಿ ನಿರತರಾಗಿ ಜ್ಞಾನಾರ್ಜನೆಯೇ ಮುಖ್ಯ ಗುರಿಯನ್ನಾಗಿಸಿಕೊಂಡು ತಮ್ಮನ್ನು ಶಿಕ್ಷಣದಲ್ಲಿ ಸಂಪೂರ್ಣವಾಗಿ ಸಮರ್ಪಿಸಿಕೊಂಡರು. ಇದಕ್ಕೆ ಪೂರಕವಾಗಿ ಮೌಲಾನ ಷರ್ಫುದ್ದೀನ್ ಕಥೇಲಿ, ಮೌಲಾನ ತಾಜುದ್ದೀನ್ ಬಹದ್ದೂರ್, ಜನಾಬ್ ಖಾಜಿ ಅಬ್ದುಲ್ ಮೊಖ್ತದರ್ ಅವರಂತಹ ಸೂಫಿ ಸಂತರ ಸಹವಾಹ ಮತ್ತು ಜ್ಞಾನವು ಇವರಿಗೆ ಲಭಿಸಿತು. ಇಂತಹವರ ಸನ್ನಿಧಿಯಲ್ಲಿ ಪಡೆದ ಜ್ಞಾನ ಅಪಾರವಾದುದು. ಒಬ್ಬ ಶ್ರೇಷ್ಠ ವಿದ್ವಾಂಸ ಹಾಗೂ ಸಾಧಕರೆನಿಸಿಕೊಂಡರು. ಇಷ್ಟಾದರೂ ತಮ್ಮ ಗುರುಗಳಿಂದ ರಹಸ್ಯಜ್ಞಾನವು ಇನ್ನೂ ದೊರೆತಿರಲಿಲ್ಲ. ಇವರಲ್ಲಿ 'ಮುರಾಖಿಬ'(ಯೋಗ)ದಂತಹ ಕಠಿಣ ಸಾಧನೆಯ ಶಕ್ತಿ ಇದೆಯೆಂದು ಗುರ್ತಿಸಿದ ಹಜರತ್ ನಸೀರುದ್ದೀನ್ ಚಿರಾಘ್ ಅವರು ಒಂದು ದಿನ ತಮ್ಮ ಶಿಷ್ಯ ಹಜರತ್ ಖಾಜಾ ಸಾಹೇಬರನ್ನು ಹತ್ತಿರ ಕರೆದು ಪ್ರೇಮದಿಂದ ಗುಪ್ತ ವಿದ್ಯೆಯನ್ನು ಉಪದೇಶಿಸತೊಡಗಿದರು (ಹಮೀದ್ ೧೯೯೪: ೧೨).[೧೦]

### ೬. ಖಲೀಫಾ ಪದವಿ

ಈ ಪದವಿಯು ಖಾಜಾ ಬಂದೇನವಾಜ ಅವರಿಗೆ ಭಯಸದೆ ಬಂದದ್ದು. ಇಷ್ಟು ಹೊತ್ತಿಗಾಗಲೇ ಇವರ ಗುರುಗಳು ವಯಸ್ಸಾದ ಕಾರಣ ಖಾಯಿಲೆಗೆ ತುತ್ತಾದರು. ಅವರ ಅನುಯಾಯಿಗಳು ಅವರ ಜಾಗದಲ್ಲಿ ಯಾರನ್ನಾದರೂ ಒಬ್ಬ ಯೋಗ್ಯ ವ್ಯಕ್ತಿಯನ್ನು ಆರಿಸಿ ಕೂರಿಸಲು ಸಲಹೆ ಮಾಡಿದ್ದರು. ಇದು ಸರಿಯಾದ ಸಲಹೆ ಎಂದು ಭಾವಿಸಿದ ಪೀರ್ ಹಜರತ್ ಖಾಜಾ ನಸಿರುದ್ದೀನ್ ಚಿರಾಘು ಅವರು ಹಿಜಿರಾ ಶಕೆ ೭೫೭ ರಂಜಾನ್ ತಿಂಗಳ ೧೫ನೇ ತಾರೀಖು ಮಂಗಳವಾರದಂದು ತಮ್ಮ ಧಾರ್ಮಿಕ ಖಲೀಫರಲ್ಲಿ ಒಬ್ಬರನ್ನು ತಮ್ಮ ಪೀಠಾಧಿಪತಿಯಾಗಿ ನೇಮಿಸಲು ತೀರ್ಮಾನಿಸಿದರು. ನನ್ನ ಸ್ಥಾನಕ್ಕೆ ಯೋಗ್ಯರಾದವರ ಹೆಸರುಗಳುಳ್ಳ ಒಂದು ಪಟ್ಟಿಯನ್ನು ತಯಾರಿಸಲು ಮೌಲಾನ ಜೈನುದ್ದೀನ್ ಎಂಬುವರನ್ನು ಆಜ್ಞಾಪಿಸಿದರು. ಅವರು ಒಂದು ಪಟ್ಟಿಯನ್ನು

ತಯಾರಿಸಿದರು. ತಮಗೆ ಬೇಕಾದ ಕೆಲವರ ಹೆಸರುಗಳನ್ನು ಪಟ್ಟಿ ಮಾಡಿ ಗುರುಗಳ ಮುಂದಿಟ್ಟರು. ಅದರಲ್ಲಿ ಹಜರತ್ ಖಾಜಾ ಸಾಹೇಬರ ಹೆಸರನ್ನು ಸೇರಿಸಿರಲಿಲ್ಲ. ಈ ಪಟ್ಟಿಯನ್ನು ಓದಿದ ಗುರುಗಳು ಮೌಲಾನ ಜೈನುದ್ದೀನರನ್ನು ಕುರಿತು ಪ್ರಶ್ನಿಸಿದರು. ನೀವು ಯಾರ ಹೆಸರನ್ನು ಬರೆದಿದ್ದೀರಿ? ಇವರಲ್ಲಿ ಯಾರು 'ಖಿಲಾಫತ್' ನಂತಹ ಉನ್ನತ ಪದವಿ ಕಾರ್ಯಭಾರವನ್ನು ನಿರ್ವಹಿಸುವ ಶಕ್ತಿ ಇದೆಯೆಂದು ನನಗನಿಸುತ್ತಿಲ್ಲವಲ್ಲ, ಇವರಲ್ಲಿ ಧಾರ್ಮಿಕ ದೃಢವಾದ ನಂಬಿಕೆಯಿಲ್ಲದಿರುವುದನ್ನು ನಾನು ಗಮನಿಸಿದ್ದೇನೆ. ಮತ್ತೆ ಅದನ್ನು ಪುನಃ ಪರಿಶೀಲಿಸಲು ಸಲಹೆ ನೀಡಿದರು. ದ್ವೇಷಾಸೂಯೆಗಳನ್ನು ಹೊಂದಿದವರಿಗೆ ಉತ್ತಮರು ಕಾಣುವುದೇ ದುರ್ಲಭ. ಮೌಲಾನ ಜೈನುದ್ದೀನರು ಎರಡನೇ ಸಲದ ಪಟ್ಟಿಯನ್ನು ಗುರುಗಳ ಮುಂದಿಟ್ಟರು. ಆ ಪಟ್ಟಿಯಿಂದ ತೆಗೆದು ಹಾಕಿ ಪುನಃ ತಮಗೆ ಬೇಕಾದ ಸ್ವಲ್ಪ ಕಡಿಮೆ ಹೆಸರುಗಳುಳ್ಳ ಪಟ್ಟಿಯನ್ನು ಸಲ್ಲಿಸಿದರು. ಈ ಸಲವೂ ಹ.ಖಾಜಾ ಸಾಹೇಬರ ಹೆಸರನ್ನು ಸೇರಿಸಿರಲಿಲ್ಲ. ಗುರುಗಳು ಪಟ್ಟಿಯನ್ನು ನೋಡಿ ಅಸಮಾಧಾನಗೊಂಡು ಪ್ರಶ್ನಿಸಿದರು. ನೀವು ಹಜರತ್ ಖಾಜಾ ಗೇಸೂದರಾಜ್‌ರ ಹೆಸರನ್ನೇಕೆ ಸೇರಿಸಲಿಲ್ಲ? ಮೌಲಾನ ಜೈನುದ್ದೀನರು ನಿರುತ್ತರವಾಗಿ ಥರಥರನೆ ನಡುಗಲಾರಂಭಿಸಿದರು. ಪಟ್ಟಿಯನ್ನು ವಾಪಸ್ ಪಡೆದ ಹ.ಖಾಜಾ ಸಾಹೇಬರ ಹೆಸರನ್ನು ಸೇರಿಸಿ ತಮ್ಮ ನೀಚತನಕ್ಕೆ ನಾಚಿದರು.

ಗುರುಗಳ ಹಜರತ್ ಖಾಜಾ ಸಾಹೇಬರನ್ನು ಪ್ರೇಮದಿಂದ ಹತ್ತಿರ ಕರೆದು ಆಶೀರ್ವದಿಸಿ 'ಹಜರತ್ ಸಯ್ಯದ್ ಮಹಮ್ಮದ್' ಎಂಬ ಬಿರುದನ್ನು ದಯಪಾಲಿಸಿದರು. ಎಲ್ಲ ಶಿಷ್ಯರ ಎದುರಿನಲ್ಲಿ ಅವ್‌ಲಿಯಾ ಧರ್ಮ ಸಿಂಹಾಸನದ 'ಖಲೀಫಾ'(ಸಾಮ್ರಾಟ) ಪದವಿಯನ್ನು ಅಲಂಕರಿಸಲು ಆಜ್ಞಾಪಿಸಿದರು. ಗುರುಗಳ ಆಜ್ಞಾನುಸಾರ ವಿಧಿವತ್ತಾಗಿ ಖಲಿಫಾ ಪದವಿಯನ್ನು ಅಲಂಕರಿಸಿದರು. ಆಗ ಅವರಿಗೆ ೩೨ ವರ್ಷಗಳು ತುಂಬಿದ್ದವು.

ಈ ಘಟನೆಯಾದ ಕೇವಲ ಮೂರು ದಿನಗಳ ನಂತರ ಅಂದರೆ ಹಿಜರಿ ೭೫೭ ರಂಜಾನ್ ತಿಂಗಳ ೧೮ನೇ ಶುಕ್ರವಾರದಂದು ಹಜರತ್ ಖಾಜಾ ನಸಿರುದ್ದೀನ್ ಚಿರಾಘ್ ದೆಹಲಿಯವರು ಅಲ್ಲಾಹ್‌ನ ಸಾನ್ನಿಧ್ಯದಲ್ಲಿ ಲೀನ ವಸಾಲತ್‌ರಾದರು (ಹಮೀದ್ ೧೯೯೪: ೧೩-೧೪).[೧೧]

೭. ಬಂದೇನವಾಜ್ ಬಿರುದು

ಗುರು ನಸಿರುದ್ದೀನರೇ ಖಾಜಾ ಸಾಹೇಬರಿಗೆ ಕೊಟ್ಟ ಬಿರುದು 'ಬಂದೇನವಾಜ್'. ಈ ನಸಿರುದ್ದೀನರು ಚಿಷ್ತಿ ಪಂಥದ ಸಂಪ್ರದಾಯದಂತೆ ತಮ್ಮ ಮನೆಯಲ್ಲಿ ದಾಸೋಹ(ಅನ್ನದಾನ) ನಡೆಸುತ್ತಿದ್ದರು. ದೇವರು ತಮಗೆ ಒದಗಿಸಿಕೊಟ್ಟ ಅನ್ನವನ್ನು ತಮ್ಮ ಹತ್ತಿರ ಬರುವ ಎಲ್ಲರಿಗೂ ಹಂಚಿಬಿಡುತ್ತಿದ್ದರು. ಹೀಗೆ ತಮ್ಮ ಭಾಗಕ್ಕೆ ಪ್ರತಿದಿನ ಬಂದ ಅನ್ನವನ್ನು ಖಾಜಾಸಾಹೇಬರು ಹಸಿದಿದ್ದ ಇತರರಿಗೆ ಕೊಡುತ್ತಿದ್ದರು. ಪೀರ್ ನಸೀರರಿಗೆ ಯಾರೋ ಈ ಸಮಾಚಾರ ತಿಳಿಸಿದಾಗಿ ಖಾಜಾಸಾಹೇಬರ ಬಗ್ಗೆ ಅವರು ಉದ್ಗಾರ ತೆಗೆದರಂತೆ. ''ಆತ ಶಿಷ್ಯಪ್ರಿಯ, ಭಕ್ತವತ್ಸಲ''. ಹೀಗೆ ಖಾಜಾ ಸಯ್ಯದ್ ಮಹಮ್ಮದರು ಬಂದೇನವಾಜ್ ಎಂದು ಪ್ರಸಿದ್ಧರಾದರು. ಅನೇಕರ ಆಪತ್ತುಗಳನ್ನು ಆತ್ಮಶಕ್ತಿಯಿಂದ ಪರಿಹರಿಸಿ ಪವಾಡಪುರುಷರೆನಿಸಿದರು (ಜಯತೀರ್ಥ ೧೯೮೦: ೧೪).[೧೨]

### ೮. ವಿವಾಹ

ತಮ್ಮ ನಲವತ್ತನೆಯ ವರ್ಷದ ವಯಸ್ಸಿನಲ್ಲಿ ಹಜರತ್ ಗೇಸೂದ್‌ರಾಜರು ತಾಯಿಯವರ ಒತ್ತಾಯದ ಮೇರೆಗೆ ವಿವಾಹವಾಗಲು ಸಮ್ಮತಿಸಿದರು. ದೆಹಲಿಯ ಪ್ರತಿಷ್ಠಿತ ವ್ಯಕ್ತಿಗಳೂ ಜ್ಞಾನಿಗಳೂ ಸೂಫಿ ಸಂತರೂ ಆದ ಸಯ್ಯದ್ ಅಹಮದ್ ಬಿನ್ ಹಜರತ್ ಮೌಲಾನ ಸಯ್ಯದ್ ಜಮಾಲ್ ಮಗ್ರಬಿಯವರ ಮಗಳು ಬೀಬಿ ರಜಾ ಖಾತೂನ್ ಅವರೊಂದಿಗೆ ಸರಳವಾದ ರೀತಿಯಲ್ಲಿ ಮದುವೆಯಾದರು. ಮೌಲಾನ ಸಯ್ಯದ್ ಜಮಾಲ್ ಅವರು ಬಿಜಾಪುರದ ಸೂಫಿ ಸಂತ ಪರಂಪರೆಯಲ್ಲಿ ಪ್ರಸಿದ್ಧರಾದ ಹಜರತ್ ಮೀರಾನ್‌ಜಿ ಶಂಕುಲ್ ಅಶಾಯಖ್‌ರ ಪೀರ್(ಗುರು) ಹಜರತ್ ಕಮಾಲುದ್ದೀನ್ ವಾಹಿದುಲೇ ಇಸ್ತಾರ್ ಬಿಯಾಖಾನಿ, ಹಜರತ್ ಜಮಾಲುದ್ದೀನ್ ಮಗ್ರಬಿಯವರು ಶಿಷ್ಯರಾಗಿದ್ದು, ದಕ್ಷಿಣ ಭಾರತದ ಪರಿಚಯವುಳ್ಳವರಾಗಿದ್ದರು (ಹಮೀದ್ ೧೯೯೪: ೧೪).[೧೬]

### ೯. ದೆಹಲಿಯಿಂದ ದಕ್ಷಿಣದತ್ತ ಮರುಪ್ರಯಾಣ

ತಮ್ಮ ಗುರುಗಳ ಮರಣಾನಂತರ ಹಜರತ್ ಖಾಜಾ ಸಾಹೇಬರು ತಮ್ಮ ಖಿಲಾಫತ್ ಪೀಠದಿಂದ ಸಾವಿರಾರು ಶಿಷ್ಯರಿಗೆ ಜ್ಞಾನದೀಕ್ಷೆಯಿಂದ ತೃಪ್ತಿಗೊಳಿಸಿದರು. ಜನಸೇವೆಯೇ ಅಲ್ಲಾಹನ ಸೇವೆಯೆಂದು ತಿಳಿದು ತಮ್ಮನ್ನು ಜನಪರ ಸೇವಾಕಾರ್ಯಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದರು.

ಹಿಜಿರಾ ಶಕೆ ೮೦೧ರಲ್ಲಿ ತೈಮೂರನು ಭಾರತದತ್ತ ದಂಡೆತ್ತಿ ಬರುತ್ತಿದ್ದಾನೆಂಬ ಸುದ್ದಿ ಇವರಿಗೆ ಮುಟ್ಟಿತು. ಆತನು ಆಟರ್ ನದಿಯನ್ನು ದಾಟಿದ್ದಾನೆಂಬ ಸುದ್ದಿ ತಿಳಿದ ದೆಹಲಿಯ ಜನರು ಭಯಭೀತರಾದರು. ದೆಹಲಿ ನಗರವು ಆಪತ್ತಿನಲ್ಲಿ ಸಿಕ್ಕಿಕೊಂಡಿತೆಂದು ತಿಳಿದ ಹಜರತ್ ಖಾಜಾ ಸಾಹೇಬರು ತಮ್ಮ ಅನುಯಾಯಿಗಳೆಲ್ಲರನ್ನು ದೆಹಲಿಯನ್ನು ಬಿಟ್ಟು ತಮಗೆ ಬೇಕಾದ ಸ್ಥಳಗಳಿಗೆ ಹೋಗಲು ಆಜ್ಞಾಪಿಸಿದರು. ತಾವೂ ದೆಹಲಿಯನ್ನು ತಮ್ಮ ಪರಿವಾರ ಸಮೇತ ಬಿಡಲು ನಿಶ್ಚಯಿಸಿ ಗ್ವಾಲಿಯರ್ ನಗರದತ್ತ ಹೊರಟರು. ಗ್ವಾಲಿಯರ್‌ನ ತಮ್ಮ ಶಿಷ್ಯ ಹಜರತ್ ಮೌಲಾನ ಅಲ್ಲಾವುದ್ದೀನ್ ಗ್ವಾಲಿಯರ್ ಅವರಿಗೆ ತಮ್ಮ ಬರುವಿಕೆಯ ಸೂಚನೆಯನ್ನು ಕಳುಹಿಸಿದರು. ಗ್ವಾಲಿಯರ್ ನಗರದ ಎಲ್ಲ ಸೂಫಿ ಸಂತರು, ವಿದ್ವಾಂಸರು, ಜ್ಞಾನಿಗಳು ಹಜರತ್ ಖಾಜಾ ಸಾಹೇಬರ ಪರಿವಾರವನ್ನು ಬಹಳ ಗೌರವದಿಂದ ಭವ್ಯ ಸ್ವಾಗತವನ್ನು ನೀಡಿದರು. ಹಜರತ್ ಮೌಲಾನ ಅಲ್ಲಾವುದ್ದೀನ್ ಗ್ವಾಲಿಯರ್ ಅವರು ತಮ್ಮ ಮನೆಯಲ್ಲಿಯೇ ಉಳಿದುಕೊಳ್ಳುವಂತೆ ಹಜರತ್ ಖಾಜಾ ಸಾಹೇಬರ ಪರಿವಾರವನ್ನು ಪ್ರಾರ್ಥಿಸಿದರು. ಸ್ವಲ್ಪಕಾಲ ಇವರ ಮನೆಯಲ್ಲಿಯೇ ಇದ್ದು ಅಲ್ಲಿನ ಜನರಿಗೆ ತಮ್ಮ ಜ್ಞಾನದ ಅಮೃತದಿಂದ ತಣಿಸಿದರು. ಇವರ ಉಪದೇಶಗಳನ್ನು ಕೇಳಲು ಪ್ರತಿದಿನ ನೂರಾರು ಜನರು ಬಂದು ಹೋಗುತ್ತಿದ್ದರು. ಇವರನ್ನೆಲ್ಲಾ ತೃಪ್ತಿಗೊಳಿಸಿದ ನಂತರ ಅಲ್ಲಿಂದ ತಮ್ಮ ಪ್ರಯಾಣವನ್ನು ಮುಂದುವರಿಸಿದರು.

ಭಾಂದೇರ್, ಏರ್‌ಚಾ ಮುಂತಾದ ಸ್ಥಳಗಳಿಗೆ ಭೇಟಿ ಕೊಟ್ಟ ನಂತರ ಚಂದೇರಿ ನಗರವನ್ನು ತಲುಪಿದರು. ಅಲ್ಲಿ ಕೆಲದಿನಗಳು ತಂಗಿದರು. ಅಲ್ಲಿಂದ ಬರೋಡಕ್ಕೆ ಹಿಜರಿ ಶಕೆ ೮೦೧-ರಂಜಾನ್ ತಿಂಗಳ ೨೬ನೆಯ ಈದುಲ್ ಫಿತರ್‌ನ 'ಶಬ್-ಎ-ಖಾದರ್'ನ ದಿನ ಭೇಟಿ ಕೊಟ್ಟರು. ಇಲ್ಲಿ ಸುಮಾರು ಒಂದು ತಿಂಗಳ ಕಾಲ ವಿಶ್ರಾಂತಿಯನ್ನು ತೆಗೆದುಕೊಂಡರು. ಅಲ್ಲಿಂದ ಕಂಬಾಯತ್ ಷರೀಫ್ ಎಂಬ ಒಬ್ಬ ಸೂಫಿಸಂತರ ಪವಿತ್ರ ಸ್ಥಳಕ್ಕೆ ಭೇಟಿ ಕೊಟ್ಟು

ಪುನಃ ಬರೋಡಕ್ಕೆ ವಾಪಸ್ಸಾದರು. ಬರೋಡಾದಿಂದ ಸುಲ್ತಾನ್‌ಪುರದ ಮಾರ್ಗವಾಗಿ ದೌಲತಾಬಾದಿನತ್ತ ಪ್ರಯಾಣವನ್ನು ಬೆಳೆಸಿದರು (ಹಮೀದ್ ೧೯೯೪: ೧೫).[೧೪]

## ೧೦. ಗುಲಬರ್ಗಾಕ್ಕೆ ಆಗಮನ

ಇವರು ಗುಲ್ಬರ್ಗಾಕ್ಕೆ ಬರುವ ಸಂದರ್ಭದಲ್ಲಿ ಆಗ ದಕ್ಷಿಣದಲ್ಲಿ ಸುಲ್ತಾನ ಫಿರೋಜ ಷಾ ಬಹಮನಿ ರಾಜ್ಯವಾಳುತ್ತಿದ್ದ. ಹಜ್ರತ್ ಖಾಜಾ ಬಂದೇನವಾಜರು ದೌಲತಾಬಾದಿಗೆ ಬಂದು ನೆಲೆಸಿದ ಸಮಾಚಾರ ಕೇಳಿ ಆ ಬಾದಷಹ ಸಂತುಷ್ಟನಾದ. ದೌಲತಾಬಾದಿನಲ್ಲಿ ಆಗ ಫಿರೋಜ ಷಹನ ಸುಬೇದಾರ ಅಸದುಲ್‌ಮುಲ್ಕ್ ಆಡಳಿತ ನಡೆಸುತ್ತಿದ್ದ. ಈತನ ಮೂಲಕ ಬಾದಷಹನು ಅರಮನೆಯ ಕಾಣಿಕೆಯನ್ನು ಗೌರವಪೂರ್ವಕವಾಗಿ ಹಜರತ್ ಖಾಜಾ ಬಂದೇನವಾಜರಿಗೆ ಅರ್ಪಿಸಲು ಕಳಿಸಿಕೊಟ್ಟುದ್ದಲ್ಲದೆ ಮಹಾತ್ಮರು ರಾಜಧಾನಿಯಾದ ಕಲಬುರ್ಗಿಗೆ ದಯಮಾಡಿಸಲು ಬಿನ್ನವಿಸಿಕೊಳ್ಳಬೇಕೆಂದು ಸುಬೇದಾರನಿಗೆ ಆದೇಶ ನೀಡಿದ.

ರಾಜನ ಪ್ರಾರ್ಥನೆಯನ್ನು ಮನ್ನಿಸಿ ಹಜರತ್ ಖಾಜಾ ಬಂದೇನವಾಜರ ಕುಟುಂಬ ಮತ್ತು ಶಿಷ್ಯ ಪರಿವಾರ ಸಮೇತ ದೌಲತಾಬಾದಿನಿಂದ ಹೊರಟರು. ಆಳಂದ ಮಾರ್ಗವಾಗಿ ಗುಲಬರ್ಗಾ ಗಡಿಯನ್ನು ಪ್ರವೇಶಿಸಿದರು. ಸುಲ್ತಾನ್ ಫಿರೋಜ್ ಷಹ ಸೈನ್ಯ ಸಮೇತ ಸ್ವತಃ ನಡೆದು ಸಕಲ ರಾಜಮರ್ಯಾದೆಯೊಂದಿಗೆ ಹಜರತ್‌ರನ್ನೂ ಅವರ ಜೊತೆಗೆ ಬಂದಿದ್ದ ಶಿಷ್ಯರನ್ನೂ ಸಾಧು ಸಂತರನ್ನೂ ಅತಿ ವಿಜೃಂಭಣೆಯಿಂದ ಸ್ವಾಗತಿಸಿದ. ಹಜರತ್ ಖಾಜಾ ಬಂದೇನವಾಜರು ಕಲಬುರ್ಗಿಯಲ್ಲಿ ಕೋಟೆಯ ಹತ್ತಿರ ಇದ್ದ(ಖಾನ್ ಖಾಹ್) ಧರ್ಮಛತ್ರದಲ್ಲಿಯೇ ಕೆಲಕಾಲ ವಾಸ ಮಾಡಿದರು. ಆಮೇಲೆ ಬಾದಷಹನ ವಿನಂತಿಯ ಮೇರೆಗೆ ಈಗ 'ದರ್‌ಗಾ ಷರೀಫ್' ಇರುವ ಸ್ಥಳದಲ್ಲಿ ಅವರಿಗಾಗಿ ವಾಸದ ವ್ಯವಸ್ಥೆಯಾಯಿತು. ಅಲ್ಲಿ ಬಂದು ನೆಲೆಸಿದ ಮಹಾತ್ಮರು ಅಲ್ಲಿಯೇ ಶಾಶ್ವತವಾಗಿ ವಾಸ ನಾಡಿದರು. ಸುಲ್ತಾನ್ ಫಿರೋಜ್ ಷಹ ದಿವಂಗತನಾದ ಮೇಲೆ ಆತನ ತಮ್ಮನಾದ ಅಹಮ್ಮದ್ ಶಾಹ ರಾಜ್ಯದ ಪಟ್ಟಕ್ಕೆ ಬಂದನು. ಈತನೂ ಸಹ ಹಜರತ್ ಬಂದೇನವಾಜರನ್ನು ಅಷ್ಟೇ ಪೂಜ್ಯ ಭಾವನೆಯಿಂದ ಕಂಡನಲ್ಲದೆ ಅವರನ್ನು ರಾಜಗುರುಗಳೆಂದು ಮನ್ನಿಸಿದನು (ಜಯತೀರ್ಥ ೧೯೮೦: ೧೬-೧೭).[೧೫]

## ೧೧. ಮಕ್ಕಳು

ಹಜರತ್ ಖಾಜಾ ಬಂದೇನವಾಜರಿಗೆ ಇಬ್ಬರು ಗಂಡು ಮಕ್ಕಳು ಮತ್ತು ಮೂರು ಜನ ಹೆಣ್ಣು ಮಕ್ಕಳಿದ್ದರು. ತಮ್ಮ ಹಿರಿಯ ಮಗನಾದ ಹಜರತ್ ಸಯ್ಯದ್ ಹುಸೇನ್ ಉರ್ಫಾ ಸಯ್ಯದ್ ಮಹಮ್ಮದ್ ಅಕ್ಬರ್ ಅವರು ಅಂದಿನ ಕಾಲದ ಶ್ರೇಷ್ಠ ವಿದ್ವಾಂಸರಾಗಿದ್ದು, ತಮ್ಮ ತಂದೆಯವರ ಆಧ್ಯಾತ್ಮಿಕ ಖಲೀಫರಾಗಿ ಪ್ರಸಿದ್ಧರಾಗಿದ್ದರು. ದುರದೃಷ್ಟವಶಾತ್ ಹಜರತ್ ಖಾಜಾ ಸಾಹೇಬರ ಕಣ್ಣೆದುರಿನಲ್ಲೇ ಪರಲೋಕ ವಾಸಿಯಾದರು. ಎರಡನೇ ಮಗನಾದ ಹಜರತ್ ಸಯ್ಯದ್ ಮಹಮ್ಮದ್ ಅಸ್ಗರ್ ಹುಸೇನಿಯವರು ಒಳ್ಳೆಯ ವಿದ್ವಾಂಸರು. ತಮ್ಮ ತಂದೆಯವರ ಮರಣಾನಂತರ ಅವರ ಜಾಗದಲ್ಲಿ ಆಧ್ಯಾತ್ಮಿಕ ಸಿಂಹಾಸನವನ್ನೇರಿದರು. ಇನ್ನೂ ಮೂರು ಜನ ಹೆಣ್ಣು ಮಕ್ಕಳು, ೧. ಬೀಬಿ ಫಾತಿಮ ಉರ್ಫ್ ಸಲೆಬೀಬಿ, ೨. ಬೀಬಿ ಬತೂಲ್ ಮತ್ತು ೩. ಬೀಬಿ ಉಮ್-ಎ-ದಿನ್ (ಹಮೀದ್ ೧೯೯೪: ೧೧೭).[೧೬]

೧೨. ಮರಣ

ದೆಹಲಿಯಲ್ಲಿ ಕ್ರಿ.ಶ.೧೩೨೧ರಲ್ಲಿ ಜನ್ಮ ತಾಳಿದ ಮಹಾನ್ ಚಿಂತನಶೀಲರು, ಜ್ಞಾನಿಗಳಾಗಿದ್ದ ಹಜರತ್ ಖಾಜಾ ಬಂದೇನವಾಜರು ಸಂತ ಜೀವನದಲ್ಲಿ ಅತ್ಯುನ್ನತ ಮಟ್ಟವನ್ನೇರಿದರು. ಗುಲಬರ್ಗಾ ನಗರದ ಜನರು ಇವರ ಉಪದೇಶಗಳಿಂದ ತೃಪ್ತರಾಗುತ್ತಿದ್ದರು. ಇವರು ಜಾತಿ ಮತಗಳ ಭೇದಭಾವವನ್ನಿಡದೆ ಮಾನವ ಕುಲವೆಲ್ಲ ಒಬ್ಬನೇ ದೈವದ ಸಂತಾನವೆಂದು ತಿಳಿದು ಬೋಧಿಸುತ್ತಿದ್ದರು. ಇವರು ಸುಮಾರು ೧೦೫ ವರ್ಷಗಳ ದೀರ್ಘ ಜೀವನವನ್ನು ಬದುಕಿ ಬಾಳಿದರು. ಕೊನೆಗೆ ಹಿಜರಿ ೮೨೫ ಜೇಖದ್ ತಿಂಗಳ ೧೬ನೇ ತಾರೀಖು ಸೋಮವಾರದಂದು ತಮ್ಮ ಶತಮಾನಕ್ಕೂ ಮೀರಿದ ಜೀವನಕ್ಕೆ ಕೊನೆ ಉಸಿರೆಳೆದು ಅಲ್ಲಾಹ್‌ನಲ್ಲಿ ವಿಸಾಲತ್ ಪದವಿಯನ್ನು ಪಡೆದರು (ಹಮೀದ್ ೧೯೯೪: ೧೮).[೧೭]

೧೩. ಬಂದೇನವಾಜ್ ದರ್ಗಾ ಸ್ಥಾಪನೆ

ದರ್ಗಾದ ವಾಸ್ತುಶಿಲ್ಪ, ದಕ್ಷಿಣ ಭಾರತದ ಇಸ್ಲಾಮಿಕ್ ಕೇಂದ್ರಗಳಲ್ಲಿ ಹಜರತ್ ಖಾಜಾ ಬಂದೇನವಾಜ್ ಗೀಸೂದರಾಜ್‌ರ ದರ್ಗಾ ಶರೀಫವೂ ಒಂದಾಗಿದೆ. ''ಈ ಕಟ್ಟಡದ ಮುಂಭಾಗವು ಎರಡು ಅಂತಸ್ತುಗಳನ್ನು ಹೊಂದಿದ್ದು, ಕಮಾನು ಗೂಡುಗಳಿಂದ ವಿಭಾಗಿತವಾಗಿವೆ. ಅಲಂಕಾರಗಳು ಕೈಪಿಡಿಗೋಡೆ ಮೂಲೆಕಂಭಗಳಿಗೆ ಮತ್ತು ಗೋಡೆಗಳ ಮೇಲೆ ಮುನ್ ಚಾಚಿದ ಚೌಕಾಕೃತಿಗಳಿಗೆ ಸೀಮಿತಗೊಂಡಿರುವುದು ಹೆಚ್ಚು ಕಳೆ ತಂದಿದೆ.''

ಕ್ರಿ.ಶ.೧೫ನೇ ಶತಮಾನದಲ್ಲಿ ಗುಲಬರ್ಗಾದ ಬಹಮನಿ ಸುಲ್ತಾನ ಅಹಮ್ಮದ್‌ಶಾಹನು ವಲಿಗಳ ಮಜಾರ(ಗೋರಿ)ದ ಮೇಲೆ ಅಮೃತಶಿಲೆಯಿಂದ ಭವ್ಯವಾದ ದರ್ಗಾವನ್ನು ಶರೀಫನು ನಿರ್ಮಿಸಿದನು. ನಂತರ ಕ್ರಿ.ಶ.೧೬೦೪ರಲ್ಲಿ ಬಿಜಾಪುರದ ಸುಲ್ತಾನ ಎರಡನೆಯ ಇಸಾ ಇಬ್ರಾಹಿಮನು ಅದಕ್ಕೊಂದು ವಿಶಾಲವಾದ ಮಂದಿರವನ್ನು ಕಟ್ಟಿಸಿದನು. ಹೀಗೆ ಅದು ಕಾಲಕಾಲಕ್ಕೆ ವಿಸ್ತೀರ್ಣಗೊಳ್ಳುತ್ತಾ ಬಂದು, ಅನೇಕ ಮಜಾರ (ಸಮಾಧಿ)ಗಳು, ಮಸೀದಿಗಳು, ಮದರಸಾಗಳು, ವಿಶ್ರಾಂತಿ ಕೋಣೆಗಳು, ವಿಶಾಲವಾದ ಒಳಾಂಗಣ ಮತ್ತು ಭವ್ಯವೂ ಸುಂದರವೂ ಆದ ದ್ವಾರಗಳಿಂದ ಕೂಡಿದೆ. ಹಜ್ರತ್ ಖಾಜಾ ಬಂದೇನವಾಜ್ ವಲಿಗಳ ದರ್ಗಾದ ಆವರಣದಲ್ಲಿ ಮುಖ್ಯವಾಗಿ ಐದು ದರ್ಗಾಗಳಿವೆ. ಅವುಗಳಲ್ಲಿ ಹಜರತ್ ಖಾಜಾ ಬಂದೇನವಾಜರ ದರ್ಗಾ ಪ್ರಮುಖವಾದವು. ಅದರಲ್ಲಿ ಮೂರು ಮಜಾರಗಳಿದ್ದು ಸಂತರ ಮಜಾರ(ಸಮಾಧಿ)ದ ಬಲಗಡೆ ಹಜರತ್ ಶಾಹದುಲ್ಲಾ, ಹುಸೇನಿ ಮಜಾರ, ಎಡಗಡೆ ಹಜರತ್ ಶಾಹ ಅಬಿಬುಲ್ಲಾ ಮಜಾವಿದ್ದು ನಡುವೆ ಹಜರತ್ ಖಾಜಾ ಬಂದೇನವಾಜ್‌ರ ಮಜಾರವಿದೆ. ಈ ದರ್ಗಾದ ಎದುರುಗಡೆ ಹಜರತ್ ಖಾಜಾ ಅಕ್ಬರ ಹುಸೇನಿ ದರ್ಗಾವಿದ್ದು, ಅದರಲ್ಲಿ ಅವರ ತಾಯಿ, ಹೆಂಡತಿ, ಮಕ್ಕಳು ಹಾಗೂ ಮೊಮ್ಮಕ್ಕಳ ಮಜಾರಗಳಿವೆ. ಹಜರತ್ ಖಾಜಾ ಬಂದಾನವಾಜ ಸಂತರ ದರ್ಗಾದ ಎಡಗಡೆ ಅನತಿ ದೂರದಲ್ಲಿರುವ ಹಜರತ್ ಖಾಜಾ ಅಜಗರ ಹುಸೇನಿ ದರ್ಗಾ ಹಾಗೂ ಹಜರತ್ ಖಾಜಾ ಖಬಿಬುಲ್ಲಾರ ದರ್ಗಾ ಒಂದೆಡೆಗೆ ಇದ್ದು, ಅವೆರಡರಲ್ಲಿ ಒಟ್ಟು ೧೧ ಮಜಾರಗಳಿವೆ. ಇದರ ಸ್ವಲ್ಪ ಮುಂದುಗಡೆ ಹಜರತ್ ಖಾಜಾ ಬಂದೇನವಾಜರ ಮಗಳು ಖಾಜಾ ಫಾತಿಮಾ ಸಾಯಿದಾಬೀ ಅವರ ಮಜಾರ ಆವರಣವಿದ್ದು, ಅದರಲ್ಲಿ ಮೂರು ಮಜಾರಗಳಿವೆ(ಇಬ್ರಾಹಿಂ ೨೦೦೮: ೨೦೫-೨೦೬).

೧೪. ಸಾಹಿತ್ಯಸೇವೆ

ಹಜರತ್ ಖಾಜಾ ಸಾಹೇಬರ ಕೀರ್ತಿ ಹಾಗೂ ಗುಣಗಾನವನ್ನು ಮಾಡುವುದು ಉಪ್ಪಿನ ಗೊಂಬೆಯು ಸಮುದ್ರದಾಳವನ್ನು ಹುಡುಕ ಹೊರಟಂತೆ. ಅಂತರಂಗ ಮತ್ತು ಬಹಿರಂಗ ವಿದ್ಯೆಗಳಲ್ಲಿ ಅಸಮಾನರು, ಚಿಶ್ತಿಯಾ ವಂಶದ ಪ್ರಸಿದ್ಧಿ ಸೂಫಿ ಸಂತ ಹಸನ್ ಬಸುರವರಿಂದ ಹಿಡಿದು ಅವರ ಗುರುಗಳಾದ ಹಜರತ್ ಖಾಜಾ ನಸೀರುದ್ದೀನ್ ಚಿರಾಘ್ ದೆಹಲಿಯವರೆಗೆ ಯಾರೂ ಬರೆಯದಷ್ಟು ಗ್ರಂಥಗಳನ್ನು ರಚಿಸಿರುವ ಕೀರ್ತಿ ಹಜರತ್ ಖಾಜಾ ಸಾಹೇಬರಿಗೆ ಸಲ್ಲುತ್ತದೆ. ಇವರ ಸಣ್ಣ ಹಾಗೂ ದೊಡ್ಡ ಗ್ರಂಥಗಳು ಒಟ್ಟು ೧೦೫ ಎಂದು ತಿಳಿದು ಬರುತ್ತದೆ. ಇವುಗಳಲ್ಲಿ ಕೆಲವು ಫಾರಸೀ ಭಾಷೆಯ ಕವಿತಾ ಸಂಗ್ರಹಗಳೂ ಇವೆ. ಇವರ ಕಾವ್ಯನಾಮ 'ಮಹಮ್ಮದ್' ಎಂದಿರುತ್ತದೆ. ಇವರ ಸಾಹಿತ್ಯಕ ಸೇವೆಯಲ್ಲಿ ಒಂದು ವಿಚಿತ್ರ ಸಂಗತಿಯೆಂದರೆ ತಮ್ಮ ಕೈಯಿಂದ ಒಂದು ಪುಟದಷ್ಟು ವಿಚಾರವನ್ನು ಬರೆಯದಿರುವುದು. ಸುಮಾರು ೧೦೫ ಪುಸ್ತಕಗಳನ್ನು ಒಬ್ಬ ಬರಹಗಾರನ ಕೈಯಿಂದ ಬರೆಸಿರುವರು. ಇವರು ಆತನನ್ನು ಯಾವಾಗಲೂ ತಮ್ಮ ಪಕ್ಕದಲ್ಲಿಯೇ ಇಟ್ಟುಕೊಳ್ಳುತ್ತಿದ್ದರಂತೆ. ತಮಗೆ ಯಾವ ಸಂದರ್ಭದಲ್ಲಿ ಭಾವನಾತ್ಮಕ ವಿಚಾರಗಳು ಹೊಳೆಯುತ್ತಿದ್ದವೋ ಆ ಕ್ಷಣ ಆ ವಿಚಾರಗಳನ್ನು ಪುನಃ ಓದಿಸಿ ತಿದ್ದಿ ಬರೆಯುವ ಗೋಜಿಗೆ ಹೋಗುತ್ತಿರಲಿಲ್ಲ. ಒಂದು ಸಾರಿ ಬರೆಯಿಸಿದ ರಚನಾತ್ಮಕ ವಿಚಾರಗಳು ಅಪರಿವರ್ತಶೀಲವಾಗಿರುತ್ತಿದ್ದುದು ಸೋಜಿಗವೇ. ಇವರ ಕವಿತೆಗಳು 'ಗಜಲ್' ಛಂದಸ್ಸಿನಲ್ಲಿಯೇ ರಚನೆಯಾಗಿವೆ. 'ಗಜಲ್' ಕವಿತೆಗಳು ಹೆಚ್ಚಾಗಿ ಹೃದಯದ ಮಿಡಿತವಾಗಿರುತ್ತದೆ. ಶ್ರೋತೃಗಳ ಮರ್ಮವನ್ನು ಸ್ಪರ್ಷಿಸುವ ಕಾವ್ಯವೆಂದರೆ 'ಗಜಲ್'. ಇವರ ಮೊಮ್ಮಗನಾದ ಜನಾಬ್ ಸಯ್ಯದ್ ಖಬೂಲಲ್ಲಾಹ್ ಅವರು ಅಲ್ಲಿ ಇಲ್ಲಿ ಬಿದ್ದಿದ್ದ ಎಲ್ಲ 'ಗಜಲ್' ಕವಿತೆಗಳನ್ನು ಸಂಗ್ರಹಿಸಿ ಒಂದು ದೊಡ್ಡ ಕವಿತಾ ಸಂಗ್ರಹವನ್ನು ಸಿದ್ಧಮಾಡಿದ್ದರು. ಅದು ಈಗ ಲಭ್ಯವಿಲ್ಲವೆಂದು ತಿಳಿದುಬರುತ್ತದೆ. ಆದರೂ ಅವರ ಹಿರಿಯ ಮಗನಾದ ಹಜರತ್ ಸಯ್ಯದ್ ಮಹಮ್ಮದ್ ಅಕ್ಬರ್ ಅವರು ಸಂಗ್ರಹಿಸಿದ 'ಮಲಅಲ್‌ಕಲಾಂ' ಎಂಬುದರಲ್ಲಿ ಕೆಲವು 'ಗಜಲ್'ಗಳು ಫಾರಸೀ ಭಾಷೆಯಲ್ಲಿ ಲಭ್ಯ. ಹಜರತ್ ಖಾಜಾ ಬಂದೇನವಾಜರು ರಚಿಸಿದ ೧೦೫ ಗ್ರಂಥಗಳಲ್ಲಿ ಕೆಲವು ಪ್ರಮುಖ ಗ್ರಂಥಗಳ ಹೆಸರುಗಳು ಉಲ್ಲೇಖನೀಯವಾಗಿವೆ.

೧. ಅಲ್ ಅಸ್ಮಾ, ೨. ಮು ಅರಿಫ್ ಷಾ (ಇದು ಅರಬ್ಬಿ ಭಾಷೇಯ ಫಾರಸೀ ತರ್ಜುಮೆಯಾಗಿದೆ), ೩. ಮುಲ್ಕಖತ್ ಕುರಾಆನ್ (ಇದರಲ್ಲಿ ಕುರಾನ್‌ನ ಮೊದಲ ಐದು ಪಾರೆ (ಖಂಡ) ಗಳ ವಿಮರ್ಶಾತ್ಮಕ ತರ್ಜುಮೆ ಇದೆ.), ೪. ಷರ ಅ ಮುಷಾರಿಖುಲು ಅನ್ವರ್ (ಇದು ಅರಬ್ಬೀ ಭಾಷೆಯಲ್ಲಿದೆ.), ೫. ಷರಅ ತ ಆರುಫ ಷರ ಅ ಆದಾಬುಲ್ ಮುರೀದೀನ್ ಇದು ಅರಬ್ಬಿಯಲ್ಲಿದೆ, ೬. ಷರಾ ತ ಆರುಫ್ ಷರಅ ಅದಾಬುಲ್ ಮುರೀದೀನ್ (ಇದು ಫಾರಸೀಭಾಷೆಯಲ್ಲಿದೆ), ೭. ಷರಅ ಫಸೂ ಸುಲ್ ಹುಕುಂ, ೮. ಖಾತಿಮ, ೯. ಷರಅ ತಮ್ಹೀದಾತ್ ಐ ನುಲ್ ಖಜಾತ್ ಹಮ್ದಾನಿ, ೧೦. ಷರಅ ರಿಸಾಲ ಖಸೀರಿಯಾ, ೧೧. ಖತಾಯರುಲ್ ಅಖ್ದಸ್-ಉಲ್-ಮಾರೂಪ್-ಬ-ರಿಸಾಲಂ ಇಷ್ಕಿಯಾ, ೧೨. ಅಸ್ಮಾಯಿಲ್ ಇಸ್ರಾರ್, ೧೩. ಹದಾಯುಖುಲ್ ಇನ್ಸ್, ೧೪. ಇಸ್ತಖಾಮತುಲ್ ಷರೀಯತ್, ೧೫. ಬತರೀಖುಲ್ ಹಖೀಖತ್, ೧೬. ಹವಾಳಿ ಖುವ್ವತುಲ್ ಖುಲೂಬ್,

೧೭. ಷರಲ ಫಿಖ್ಯ-ಯೆ-ಅಕ್ಬರ್, ೧೮. ಷರಅಲ್ ಹಾಮಾತ್ ಹಜ್ರತ್ ಗೌಸುಲ್ ಆಜಂ, ೧೯. ರಿಸಾಲ-ಯೆ-ಇಜಿಕಾರ್ (ಇದರಲ್ಲಿ ಮುರಾಖಿಬ (ಯೋಗ) ಮತ್ತು 'ಫನಾ-ಬಖಾ' ತತ್ವಗಳ ಪೂರ್ಣ ವಿವರಣೆ ಇದೆ, ೨೦. ತಕ್ಮಿಲಾ ಸಿಯರುಲ್ ಆವ್‌ಲಿಯಾ (ಇದು ಫಾರಸಿ ಭಾಷೆಯಲ್ಲಿದೆ). ಇವರು ನಾಲ್ಕು ಸಾಲಿನ ರುಬಾಯತ್ ಛಂಧಸ್ಸಿನಲ್ಲಿಯೂ ನೂರಾರು ಮುಕ್ತಕ ಕವಿತೆಗಳನ್ನೂ ರಚಿಸಿದ್ದಾರೆ. ಶೇರ್ ಛಂದಸ್ಸಿನ ದ್ವಿಪದಿಗಳಿಂದಲೂ ಜನಮನ ರಂಜಿಸಿದ ಒಬ್ಬ ಶ್ರೇಷ್ಠ ಕವಿ ಹಾಗೂ ಲೇಖಕರೆಂದು ಕೀರ್ತಿಯನ್ನು ಪಡೆದಿದ್ದರು (ಹಮೀದ್ ೧೯೯೪: ೧೯-೨೧).[೧೮]

ಅದಲ್ಲದೇ ಬಂದೇನವಾಜರು ಕಲಬುರ್ಗಿ ಜನಕ್ಕೆ ಉರ್ದು ಭಾಷೆಯಲ್ಲಿ ಹೇಳಿದರೆ ತಿಳಿಯುತ್ತದೆ ಎಂಬ ಕಾರಣಕ್ಕಾಗಿ ಸಾಹಿತ್ಯ ರಚನೆಗೆ ಉರ್ದು ಭಾಷೆಯನ್ನು ಬಳಸುವ ಅನಿವಾರ್ಯತೆ ಅವರಿಗೆ ಎದುರಾಯಿತು. ಉರ್ದು ಭಾಷೆಯಲ್ಲಿ ಗದ್ಯರಚನೆ ಮಾಡಿದ ಪ್ರಥಮ ಬರಹಗಾರರು ಎಂಬ ಕೀರ್ತಿಗೆ ಪಾತ್ರರಾಗಿದ್ದಾರೆ. ಉರ್ದುವಿನಲ್ಲಿ ಪ್ರಾರಂಭದಲ್ಲಿ ಕಾವ್ಯರಚನೆ ಮಾಡಿದವರ ಸಾಲಿನಲ್ಲಿಯೂ ಬಂದೇನವಾಜರ ಹೆಸರು ಕೇಳಿಬರುತ್ತದೆ. ಗುರು ಶಿಷ್ಯರು ಸಂವಾದವನ್ನು ಒಳಗೊಂಡ ಸೂಫಿ ತತ್ವ ನಿರೂಪಣೆಯ ಪ್ರಥಮ ಗ್ರಂಥವೆಂದು ಕರೆಸಿಕೊಳ್ಳುವ 'ಮೇರಾಜುಲ್ ಆಘ್ ಖೀನ್' ಎಂಬ ಕೃತಿ ಹೆಸರುವಾಸಿಯಾಗಿದೆ. ಇದು ಉರ್ದು ಭಾಷೆಯಲ್ಲಿ ರಚನೆಯಾದ ಪ್ರಥಮ ಗದ್ಯಕೃತಿ ಎಂದೂ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಅವರ ಕೃತಿಗಳ ಕನ್ನಡ ಅನುವಾದವಾಗಬೇಕಾದ ಕೆಲಸವನ್ನು 'ಗೇಸೂದ್‌ರಾಜ್ ಗ್ರಂಥಮಾಲೆ' ಮಾಡುತ್ತಿದೆ. ಆದಷ್ಟು ತೀವ್ರಗತಿಯಲ್ಲಿ ಈ ಕೆಲಸವಾದರೆ ಖಾಜಾ ಬಂದೇನವಾಜರ ಸಾಹಿತ್ಯಕ ಕೊಡುಗೆಯ ಪರಿಚಯ ಕನ್ನಡ ಜನರಿಗೆ ಲಭ್ಯವಾಗುತ್ತದೆ (ದಂಡೆ ೨೦೦೮: ೪೫-೪೮). [೧೯]

೧೫. ಐತಿಹ್ಯಗಳು

ಮಧ್ಯಕಾಲೀನ ಭಾರತದ ಇತಿಹಾಸವು ಧಾರ್ಮಿಕ ದೃಷ್ಟಿಕೋನದಿಂದ ಅತ್ಯಂತ ಮಹತ್ವವುಳ್ಳ ಕಾಲಾವಧಿಯಾಗಿತ್ತು. ಅದರಲ್ಲೂ ಸೂಫಿ ಸಂತ ಬಂದೇನವಾಜರ ಆಗಮನದ ತರುವಾಯ ಅನೇಕ ಐತಿಹ್ಯಗಳು ಇತರ ಹಿಂದೂ ಶಿವಶರಣರ ಜೊತೆಗಿನ ಸಂಬಂಧವು ಅವರ ಧಾರ್ಮಿಕ ಸಹಿಷ್ಣುತಾಭಾವನೆಯು ಅತ್ಯಂತ ಶ್ಲಾಘನೀಯವಾಗಿದೆ. ಖಾಜಾ ಬಂದೇನವಾಜರ ಕಾಲಕ್ಕೂ ಇತರ ಹಿಂದೂ ಶಿವಶರಣರ ಕಾಲಕ್ಕೂ ಹಲವು ವರ್ಷಗಳ ಅಂತರವಿದ್ದರೂ ಜನರು ಮೊದಲನೇ ಬಂದೇನವಾಜರನ್ನೇ ಇತರ ಘಟನೆಗಳ ಅವಧಿಯಲ್ಲಿರುವುದು ಎಂದು ಐತಿಹ್ಯಗಳನ್ನು ಸೃಷ್ಟಿ ಮಾಡಿಕೊಂಡು ಅದನ್ನೇ ಇಂದಿಗೂ ಆಚರಣೆಯಲ್ಲಿ ತೊಡಗಿಸಿಕೊಂಡಿರುವ ಇಲ್ಲಿನ ಜನತೆಯ ಧಾರ್ಮಿಕ ಮನೋಭಾವನೆಯನ್ನು ಎತ್ತಿ ತೋರುತ್ತದೆ. ಅವು ಈ ಕೆಳಗಿನಂತಿವೆ.

೧. ಕಲಬುರ್ಗಿಯ ಬಂದೇನವಾಜ್ ಸಂತನ ದರ್ಗಾದಲ್ಲಿ ಕಂಡುಬರುವ ಪಾದಗಳ ಕಥೆ ಬೇರೆ ರೀತಿಯದು. ದರ್ಗಾದ ಬಾಗಿಲ ಮುಂದೆ ಮತ್ತು ಬಾಗಿಲಿನ ಎತ್ತರ ಕಟ್ಟೆಯ ಮೇಲೆ ಎರಡು ಗುರುತು ಮಾಡಿವೆ. ಒಬ್ಬ ಕಳ್ಳನ ಸಂಕೇತವಾಗಿ ಈ ಪಾದಗಳು ರಚನೆಯಾಗಿ ಕಥೆಯೊಂದನ್ನು ತಿಳಿಸುತ್ತವೆ. ಹಿಂದೆ ತೀರ ಭಾಗದಲ್ಲಿ ಕಟ್ಟಿರುವ ಚಿನ್ನದ ಪಾದವನ್ನು ಅಪಹರಿಸಲು ಬಂದ ಕಳ್ಳ ಅದನ್ನು ಮುಟ್ಟುವಷ್ಟರಲ್ಲಿಯೇ ಅದು ಮೇಲೇರಿ ದರ್ಗಾದ

ತುಟ್ಟತುದಿಗೆ ಹೋಗಿ ಅಂಟಿಕೊಂಡಿತು. ಕಳ್ಳ ಪಶ್ಚಾತ್ತಾಪದಿಂದ ಹಿಂದಿರುಗಿದ. ಈಗಲೂ ಆ ಸಂಕೇತವಾಗಿ ಅನೇಕ ಪಾದಗಳ ಕುರಿತು ಐತಿಹ್ಯಗಳು ತೋರುತ್ತಿದ್ದು, ಇವೆಲ್ಲ ಆ ಸತ್ಪುರುಷರ ಪವಾಡ, ಪ್ರಸಿದ್ಧಿ ಜನಮನದಲ್ಲಿ ಬಿತ್ತರಿಸಲಿಕ್ಕೆಂದೇ ಸೃಷ್ಟಿಯಾದವುಗಳೆನಿಸುತ್ತವೆ (ಪೊಲೀಸ್ ಪಾಟೀಲ ೨೦೦೧: ೧೪೬).[೨೦]

೨. ಬಂದೇನವಾಜ್ ಹಾಗೂ ಕಲಬುರಗಿ ಶರಣ ಬಸವೇಶ್ವರ ಈ ಇಬ್ಬರ ದೋಸ್ತರ ಬಗ್ಗೆ ಅನೇಕ ಮಿತಿಗಳಿವೆ. ಬಂದೇನವಾಜನ ಪರಸ ಬಟ್ಟಲು ಬಾರದ ಶರಣ ಬಸವೇಶ್ವರನ ತೇರು ಚಲಿಸುವುದಿಲ್ಲವೆಂಬ ಇತ್ಯಾದಿ ನಂಬಿಕೆಗಳಿವೆ (ತರಿಕೇರೆ ೨೦೦೮: ೬೭).[೨೧]

೩. ಕಲಬುರ್ಗಿಯಿಂದ ಮೂರ್‍ನಾಲ್ಕು ಕಿ.ಮೀ.ಗಳ ಅಂತರದಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯದ ಪಕ್ಕದಲ್ಲಿ ಕುಸನೂರು ಎಂಬ ಚಿಕ್ಕ ಗ್ರಾಮವಿದೆ. ಈ ಕುಸನೂರು ಗ್ರಾಮದಲ್ಲಿ ಶ್ರೀ ಸಿದ್ಧೇಶ್ವರ ಸ್ವಾಮಿಯ ಮಠವಿದೆ. ಸಿದ್ಧೇಶ್ವರ ಸ್ವಾಮಿಯ ಮೂಲಸಮಾಧಿ ಸ್ಥಾನಕ್ಕೆ ತಲುಪಬೇಕಾದರೆ ನೆಲಮಾಳಿಗೆಯಲ್ಲಿ ಸಮಾಧಿಯ ದರ್ಶನವಾಗುತ್ತದೆ. ಮೂಲಗದ್ದುಗೆಯ ಮೇಲೆ ಸುಮಾರು ಹದಿನೈದು ಅಡಿಗಳ ಅಂತರದಲ್ಲಿ ಬೆಳಕಿಗಾಗಿ ಬೆಳಕಿಂಡಿಯೊಂದನ್ನು ಕೊರೆದಿದ್ದಾರೆ. ಅಲ್ಲಿಂದಲೇ ನೇರವಾಗಿ ಬೆಳಕು ನೆಲಮಾಳಿಗೆಯಲ್ಲಿ ಬರುತ್ತದೆ. ಈಗ ವಿದ್ಯುದ್ದೀಪದ ವ್ಯವಸ್ಥೆ ಕೂಡಾ ಇದೆ. ಕಾಲಮಾನ, ಇತಿಹಾಸ, ದಾಖಲೆಗಳಾವುವು ಸಿಗುವುದಿಲ್ಲ. ಈಗ ಖಾಜಾ ಬಂದೇನವಾಜ್ ಸಮಾಧಿ ಹೊಂದಿದ ಸ್ಥಳ(ದರ್ಗಾ) ಅದಕ್ಕೆ ಸಿಲಫೇನ ಎಂದು ಕರೆಯುತ್ತಿದ್ದರಂತೆ- ಆ ಶಿಲ್ಪಿಗ್ರಾಮವು ಗಿಡ ಮರಗಳಿಂದ ಆವೃತವಾಗಿತ್ತು.

ಸ್ಥಳವೊಂದರಲ್ಲಿ ತನ್ನ ಶಿಷ್ಯರೊಂದಿಗೆ ಧ್ಯಾನ-ತಪಸ್ಸು ತಲ್ಲೀನನಾಗಿ ಸಿದ್ಧಪ್ಪಯ್ಯ ಎಂಬ ಶರಣರು ಇರುತ್ತಿದ್ದರಂತೆ. ಬಹಮನಿ ದೊರೆ ಫಿರೋಜ್ ಶಾಹ ಆಹ್ವಾನವನ್ನು ಮನ್ನಿಸಿ ಖಾಜಾ ಬಂದೇನವಾಜರು ಗುಲಬರ್ಗಾಕ್ಕೆ ಬಂದರು. ಫಿರೋಜ್‌ಶಾ ಹಾಗೂ ಅವನ ತಮ್ಮ ಅಹ್ಮಾದ್ ಶಾ ಇವರ ಶಿಷ್ಯರಾಗಿದ್ದರು. ಆದರೆ ಫಿರೋಜ್ ಶಾಹಾನಿಗೂ ಬಂದೇನವಾಜರಿಗೂ ವಿರಸ ಉಂಟಾಯಿತು. ಫಿರೋಜ್‌ಗೆ ತನ್ನ ತರುವಾಯ ತನ್ನ ಮಗ ಹಸನ್ ಪಟ್ಟಕ್ಕೆ ಬರಬೇಕೆಂದು ಬಯಕೆ. ಆಗ ರಾಜ್ಯಾಡಳಿತದಲ್ಲಿ ಭಾಗಿಯಾಗಿದ್ದ ಅಹ್ಮದ್ ಶಾಹನೆ ಪಟ್ಟಕ್ಕೇ ಸೂಕ್ತ ಅಧಿಕಾರಿ ಎಂಬುದು ಬಂದೇನವಾಜರ ಅಭಿಮತ. ಈ ಭಿನ್ನಾಭಿಪ್ರಾಯದಿಂದ ಕ್ಷುದ್ರನಾದ ಫಿರೋಜ್ ಶಾಹನು ಬಂದೇನವಾಜರನ್ನು ಊರಿನಿಂದ ಹೊರಕ್ಕೆಹಾಕಿ ಹಸನ್‌ಬಾದದಲ್ಲಿ ಇರುವಂತೆ ಮಾಡಿದ. ಈ ಹಸನಾಬಾದ್ ಶಿಲ್ಪಿಗ್ರಾಮ. ಅಲ್ಲಿಂದ ಹೊರಬಂದ ಸಯ್ಯದ್ ಹಜರತ್ ಖಾಜಾ ಬಂದೇವಾಜರು ಶರಣ ಸಿದ್ಧಪ್ಪಯ್ಯನವರು ಬಂದೇನವಾಜರಿಗೆ ಗೌರವಿಸಿ ಕೂಡ್ರಿ ಕೂಡ್ರಿ ಎಂದಾಗ ಕೂಡಲು ಬಂದಿಲ್ಲ. ಇರಲಿಕ್ಕೆ ಬಂದಿದ್ದೇವೆ ಎನ್ನುತ್ತಿದಂತೆ ಆಯಿತು. ಇರ್ರಿ ಎಂದು ಸಿದ್ಧಪ್ಪಯ್ಯನವರು ಹೇಳುತ್ತಾರೆ. ಶರಣ ಸಿದ್ಧಪ್ಪಯ್ಯ ಸೂಫಿ ಸೈಯದ್ ಹಜರತ್ ಖಾಜಾ ಬಂದೇನವಾಜರ ಆತ್ಮಗಳು ಮಿಲನವಾಗಿ ಒಂದೇ ಎಂಬುದನ್ನು ಸಾಬೀತುಪಡಿಸುತ್ತವೆ. ನಂತರ ಮಾತುಕೊಟ್ಟಂತೆ ಸಿದ್ಧಯ್ಯನವರು ಖಾಜಾ ಬಂದೇನವಾಜರಿಗೆ ಸ್ಥಳವನ್ನು ಬಿಟ್ಟುಕೊಟ್ಟರಂತೆ ಎಂದು ಜನ ಹೇಳುತ್ತಾರೆ. ಸಿದ್ಧಪ್ಪಯ್ಯನವರು ಬಂದೇನವಾಜರಿಗೆ ಶಿಲ್ಪಿ ಗ್ರಾಮದ ಸ್ಥಳವನ್ನು ಬಿಟ್ಟು ಕುಸನೂರಿಗೆ ತೆರಳುವ ಕಾಲಕ್ಕೆ ಅವರನ್ನು ಕಳಿಸಲು ಶಾಹುಸೇನಸಾಬ ಎಂಬ ಶಿಷ್ಯ ಬಂದು ಕುಸನೂರಿನಲ್ಲಿಯೇ

ಉಳಿದನಂತೆ. ಆತನ ಸಮಾಧಿ ಕುಸುನೂರಿನ ಊರ ಪ್ರವೇಶದಲ್ಲಿಯೇ ಸಿಗುತ್ತದೆ (ಕಂದಳ್ಳಿ ೨೦೦೮: ೪೧-೪೩).[೨೨]

೪. ಸಾವಳಗಿ ಶ್ರೀ ಶಿವಲಿಂಗೇಶ್ವರ ಮಠವು ಕಲಬುರ್ಗಿ ಜಿಲ್ಲೆಯಲ್ಲಿಯೇ ಐತಿಹಾಸಿಕ ಪರಂಪರೆಯನ್ನು ಹೊಂದಿದೆ. ವಿಶಾಲವಾದ ತೋಟದ ಪ್ರಾಂಗಣದಲ್ಲಿರುವ ಈ ಮಠವು ಭಕ್ತರಿಗೆ ಭಕ್ತಿಯ ದರ್ಶನವನ್ನು ಮಾಡಿಸುತ್ತದೆ. ಶ್ರೀ ಶಿವಲಿಂಗೇಶ್ವರರು ಸಿದ್ಧಿಯ ಸಾಧಕರು. ಇವರ ಮಹಿಮೆಯನ್ನು ಕೇಳಿ ಭಕ್ತರು ತಂಡೋಪತಂಡವಾಗಿ ದರ್ಶನಕ್ಕೆ ಬರುತ್ತಿದ್ದರು. ಈ ಸುದ್ದಿಯನ್ನು ಕೇಳಿ ತಿಳಿದ ಸಂತ ಹಜರತ್ ಖಾಜಾ ಬಂದೇನವಾಜರು ಉರುಸಿಗೆ ಕರೆಸಬೇಕೆಂದು ತಮ್ಮ ಶಿಷ್ಯ ರೋಜದ ರಾಜನಿಗೆ ತಿಳಿಸಿದರು. ರಾಜನ ಆಣತಿ, ಬಂದೇನವಾಜರ ಅಪೇಕ್ಷೆಯೆಂಬತೆ ಸೇವಕನು ಬಂದು ಗುರು ಬಂದೇನವಾಜ್‌ರು ತಮ್ಮನ್ನು ಉರುಸಿಗೆ ಕರೆತರಲು ಹೇಳಿದ್ದಾರೆಂದು ಹೇಳುತ್ತಾನೆ. ಆಗ ಶ್ರೀ ಶಿವಲಿಂಗೇಶ್ವರರು 'ನಮ್ಮದೇನು ಕೆಲಸ, ನಾವು ಬರುವುದಿಲ್ಲ'ವೆಂದು ಹೇಳಿ ಕಳಿಸುತ್ತಾರೆ. ಈ ಸುದ್ದಿ ರೋಜದ ರಾಜನಿಗೆ ಮುಟ್ಟಿ ಸೇನಾಪಡೆಯ ತುಕಡಿಯೊಂದನ್ನು ಕರೆದು ಆ ಜಂಗಮ ಬರದಿದ್ದರೆ ಹಿಡಿದುಕೊಂಡು ಬನ್ನಿರೆಂದು ಅಪ್ಪಣೆ ಮಾಡುತ್ತಾನೆ. ಸಾವಳಗಿಗೆ ಬಂದ ಸೈನಿಕರಿಗೆ ಶ್ರೀ ಶಿವಲಿಂಗೇಶ್ವರರು ತಮ್ಮ ಹತ್ತಿರ ಇರುವ ಕಾಳದೈತ್ಯದ ಸಹಾಯದಿಂದ ಸೈನ್ಯವನ್ನು ಹಿಮ್ಮೆಟ್ಟಿಸಲಾಯಿತು.

ಬಂದೇನವಾಜರು ಸ್ವತಃ ತಾವೇ ಸಾವಳಗಿಗೆ ಬರುತ್ತಾರೆ. ಶಿವಲಿಂಗೇಶ್ವರರು ಮಾನವ ರೂಪದಲ್ಲಿರುವ ಅಲ್ಲಾಹ್ ಎಂದು ಭಾವಿಸುತ್ತಾರೆ. ಅವರ ಮೊದಲ ಭೇಟಿಯ ಸಂದರ್ಭವೊಂದು ಹೀಗಿದೆ. ಬಂದೇನವಾಜರು ಹುಲಿಯ ಮೇಲೆ ಸವಾರಿ ಮಾಡುತ್ತಾ ಬರುತ್ತಾರೆ. ಶಿವಲಿಂಗೇಶ್ವರರು ಕಟ್ಟೆಯ ಮೇಲೆ ಬಾಲ ಮಹಾಂತೇಶನನ್ನು ಆಡಿಸುತ್ತಾ ಕುಳಿತಿರುತ್ತಾರೆ. ಬಂದೇನವಾಜರು ಬರುವುದನ್ನು ಗ್ರಹಿಸಿದ ಶಿವಲಿಂಗೇಶ್ವರರು ತಾವು ಕುಳಿತ ಕಟ್ಟೆಯನ್ನು ನಡೆಸಿ ಬಂದೇನವಾಜರಿಗೆ ಭೆಟ್ಟಿಯಾದರೆಂದು ತಿಳಿದುಬರುತ್ತದೆ. ಈ ಕಟ್ಟೆಯು ಇಂದಿಗೂ ಮಠದ ವಿಶಾಲವಾದ ಅಂಗಳದಲ್ಲಿದೆ. 'ಕಲ್ಯಾಣಕಟ್ಟೆ' ಎಂದು ಇದನ್ನು ಕರೆಯುತ್ತಾರೆ. ಆ ಕಟ್ಟೆಗೆ ಗೌರವಪೂರ್ವಕವಾದ ವಂದನೆಯನ್ನು ಜನ ಸಲ್ಲಿಸುತ್ತಾರೆ. ಅವರ ಮಿಲನದ ನೆನಪಿಗಾಗಿ ಬಂದೇನವಾಜರು ತಾವು ಧರಿಸಿದ್ದ ಶೈಲಿ ಶಮನ, ಟೊಪ್ಪಿಗೆ ಹಸಿರು ನಿಶಾನಿ ಶ್ರೀ ಶಿವಲಿಂಗೇಶ್ವರರಿಗೆ ನೀಡಿ ಇದು ನಮ್ಮ ಕುರುಹು ನಿಮಗಿರಲಿ ಎಂದು ಕೊಟ್ಟರಂತೆ (ಕರದಳ್ಳಿ ೨೦೦೮: ೪೪-೪೫).[೨೩]

೫. ರಟಗಲ್ ರೇವಣ ಸಿದ್ಧೇಶ್ವರರು ಮತ್ತು ಬಂದೇನವಾಜರು ಸಾವಳಗೆಯ ಶ್ರೀ ಶಿವಲಿಂಗೇಶ್ವರರಂತೆ ಬಂದೇನವಾಜರಿಗೂ ರಟಗಲ್ಲಿನ ರೇವಣ ಸಿದ್ಧೇಶ್ವರರಿಗೂ ಗೆಳೆತನವಿದ್ದಿತೆಂದು ತಿಳಿದುಬರುತ್ತದೆ. ರೇವಣಸಿದ್ಧೇಶ್ವರರ ಕಾಲಕ್ಕೂ ಬಂದೇನವಾಜರ ಕಾಲಕ್ಕೂ ಹೊಂದಾಣಿಕೆಯಾಗವುದಿಲ್ಲವಾದರೂ ಆ ಕಾಲಕ್ಕೆ ಇದ್ದ ಆಯಾ ಮಠದ ದರ್ಗಾದ ಪೀಠಸ್ಥ ಪರಂಪರೆಯವರೆಂದು ಭಾವಿಸಬೇಕು ಅಷ್ಟೆ.

ಕಲಬುರ್ಗಿಯಿಂದ ಸುಮಾರು ೩೫-೪೦ ಕಿ.ಮೀ.ಗಳ ಅಂತರದಲ್ಲಿ ರಟಗಲ್ ಎಂಬ ಗ್ರಾಮವಿದ್ದು, ಆ ಗ್ರಾಮದ ಎತ್ತರವಾದ ಪ್ರದೇಶದಲ್ಲಿ ರೇವಣಸಿದ್ಧೇಶ್ವರರ ಬಹುದೊಡ್ಡ ದೇವಾಲಯವಿದೆ. ಪ್ರತಿ ಅಮಾವಾಸ್ಯೆಗೊಮ್ಮೆ ಜನ ಜಾತ್ರೆಯೋಪಾದಿಯಲ್ಲಿ ಸೇರುತ್ತಾರೆ. ದೂರ ದೂರದಿಂದ ಭಕ್ತರು ದರ್ಶನಕ್ಕಾಗಿ

ಬರುತ್ತಾರೆ. ರೇವಣಸಿದ್ದೇಶ್ವರರ ಗುಡಿಯ ಹಿಂದೆ ಹೋದರೆ ಸ್ಥಳದ ಪರಿಚಯವನ್ನು ಈ ರೀತಿ ಮಾಡಿಕೊಡುತ್ತಾನೆ. ಇದು ಶಿವನ ಹಂದರ ಹಾಗೂ ಕಂಡಿರಳ ಬಂಡೆ, ಮುಂದಕ್ಕೆ ಹೋದರೆ ಬಸವಣ್ಣನ ಗುಡಿ ಗುಡಿಯ ಮೇಲ್ಗಡೆ ಮಾಣಿಕ ಪ್ರಭು ಧ್ಯಾನ ಮಾಡಿದ ಸ್ಥಳ ಆತನ ಹೆಸರಿನಲ್ಲಿ ಚಿಕ್ಕಗುಡಿಯೊಂದನ್ನು ಕಟ್ಟಿದ್ದಾರೆ. ಆ ಸ್ಥಳದಿಂದಲೆ ರೇವಣಸಿದ್ಧೇಶ್ವರರು ಪ್ರಭುವಿಗೆ ದರ್ಶನ ಕೊಟ್ಟರೆಂದು ಹೇಳುತ್ತಾರೆ. ಆ ಮಾಣಿಕ ಪ್ರಭುವಿನ ಎಡಬಲಗಳಲ್ಲಿ ಕಿಟಕಿಗಳಿವೆ. ಆ ಕಿಟಕಿಯಿಂದ ನೋಡಿದರೆ ಕಲಬುರ್ಗಿಯ ಖಾಜಾ ಬಂದೇನವಾಜರ ದರ್ಗಾದ ಹಸಿರುದೀಪ(ರಾತ್ರಿ ಹೊತ್ತಿನಲ್ಲಿ) ಕಾಣುತ್ತದೆಯೆಂದು ಹೇಳುತ್ತಾರೆ. ಇಡೀ ಕಲ್ಬುರ್ಗಿ ಕಾಣುತ್ತದೆ. ಆದರೆ ಬಂದೇನವಾಜರ ಹಸಿರುದೀಪವೆ ಕಾಣುತ್ತದೆ ಎಂದು ಹೇಳುವ ಉದ್ದೇಶವೇನು? ಈ ಸ್ಥಳದಲ್ಲಿ ಬಂದೇನವಾಜರು ಅನುಷ್ಠಾನ ಮಾಡಿದ್ದರೆಂದು ಇಲ್ಲಿಗೆ ಬಂದಿದ್ದರೆಂದು ಇಲ್ಲಿನ ಜನ ಹೇಳುತ್ತಾರೆ, ರೇವಣಸಿದ್ಧೇಶ್ವರರ ಹಾಗೂ ಬಂದೇನವಾಜರ ಗೆಳೆತನದ ಪ್ರೇರಕವಾಗಿ ಗುಡಿಗೆ ಜಾಜಾ ಹಚ್ಚುವುದಿಲ್ಲವೆಂಬ ಮಾತು ಕೇಳಿ ಬರುತ್ತಿದೆ. ''ಖಾಜಾ ಬಂದೇನವಾಜರು ಬಂದು ಹೋದ ನಂತರ ಅದಕ್ಕೆ ಜಾಜಾ ಹಚ್ಚಂಗಿಲ್ಲ.'' ಹೀಗೆ ಒಬ್ಬರಿಬ್ಬರೂ ಬದುಕಿದ, ಬಾಳಿದ ಪ್ರಸಂಗಗಳು ನಮಗೆ ಕಾಣಬರುತ್ತವಾದರೂ ಐತಿಹ್ಯಗಳ ಮೂಲಕವಾಗಿ, ಜನ ನಂಬಿಕೆಯ ಮುಖಾಂತರವಾಗಿ ಸಿಗುತ್ತವೆ ಹೊರತು, ದಾಖಲೆಗಳಾವುವೂ ದೊರೆಯುವುದಿಲ್ಲ. ನೂರಾರು ವರ್ಷಗಳಿಂದ ಜನ ಹೇಳುತ್ತಾ ಬರುತ್ತಾರೆಂದರೆ ಅದನ್ನು ನಂಬಲೇಬೇಕಾಗುತ್ತದೆ (ಕರದಳ್ಳಿ ೨೦೦೮: ೪೬-೪೮).[೨೫]

### ೨.೨. ಬಂದೇನವಾಜ್ ಅವರ ಸಿದ್ಧಾಂತಗಳು

ಪ್ರತ್ಯೇಕ ಮಹಾಪುರುಷರು ತನ್ನ ಕಾಲದ ಪರಿಣಾಮ ಎಂಬ ತತ್ವಕ್ಕೆ ಅನುಭೂತಿಗಳು ಹೆಚ್ಚಾದಾಗ ಅವುಗಳ ಅಭಿವ್ಯಕ್ತಿ ಮತ್ತು ಪ್ರಚಾರಕ್ಕೋಸ್ಕರ ಮಹಾತ್ಮರು ಸಂತರು ತಮ್ಮದೇ ಆದ ಸತ್ಯ ಸಿದ್ಧಾಂತಗಳನ್ನು ಹೊತ್ತು ಜನ್ಮ ತಾಳುವುದು ಜಗತ್ತಿನ ಸಹಜ ಕ್ರಿಯೆಯಾಗಿದೆ. ಹಜರತ್ ಖಾಜಾ ಸಾಹೇಬರು ಒಬ್ಬ ಸಾಮಾನ್ಯ ವ್ಯಕ್ತಿಯಾಗಿರದೆ ಒಬ್ಬ ಮಹಾನ್ ಸೂಫಿ ಸಂತರಾಗಿದ್ದರು. ಇಸ್ಲಾಂ ಧರ್ಮದ ತಳಹದಿಯ ಮೇಲೆ ನಿಂತು ಅಂದಿನ ಜನತೆಗೆ ಸೂಫಿ ಅಥವಾ ಅವಲಿಯಾಯ ಕೆರಾಮ್‌ರ ಪ್ರೇಮ ಸಂದೇಶವನ್ನು ಸಾರಿದ ಒಬ್ಬ ಚಿಂತಕರೂ, ಸಮಾಜ ಸುಧಾರಕರೂ ಆಗಿದ್ದರು. ಹಜರತ್ ಖಾಜಾ ಬಂದೇನವಾಜರ ಉಪದೇಶಗಳನ್ನು ಅರಿಯಬೇಕಾಗಿದ್ದರೆ ಮೊದಲು ಸೂಫಿ ಎಂಬ ಶಬ್ದದ ಅರ್ಥವೇನು, ಅವರು ಯಾರು, ಅವರ ಸಿದ್ಧಾಂತಗಳೇನು ಎಂಬ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳುವುದು ಉಚಿತವಾಗಿದೆ. ಸೂಫಿ ಶಬ್ದವು ಅರೇಬಿಯಾ ದೇಶದ ಮೂಲವಾಗಿದ್ದು ಸೂಫ್ ಎಂದರೆ ಉಣ್ಣೆ ಎಂಬುದರಿಂದ ಬಂದಿದೆ. ಉಣ್ಣೆ(ಉಲ್ಲನ್) ರಗ್ಗುಗಳನ್ನು ಹೊದ್ದು ಯಾವ ಫಕೀರರು ಒಂದು ಕಡೆಯಿಂದ ಮತ್ತೊಂದು ಕಡೆಗೆ ಇಸ್ಲಾಂಧರ್ಮ ಪ್ರಚಾರಗೊಳಿಸುತ್ತಾ ತಿರುಗುತ್ತಿದ್ದರೋ ಅವರೇ ಸೂಫಿ ಫಕೀರರು ಎಂದು ಅಹಮ್ಮದ್ ಹುಸೇನ್‌ರ ಪರಿಭಾಷೆ ಸೂಕ್ತವಾಗಿದೆ. ಸೂಫಿಗಳು ಮೂಲವಾಗಿ ಏಕೇಶ್ವರವಾದದಲ್ಲಿ ದೃಢ ನಂಬಿಕೆಯನ್ನಿಟ್ಟುಕೊಂಡು ಇಸ್ಲಾಂ ಧರ್ಮಾವಲಂಬಿಗಳಾಗಿರುತ್ತಾರೆ. ಇಸ್ಲಾಂ ಧರ್ಮವು ಹುಟ್ಟುವುದಕ್ಕೆ ಮೊದಲಿನಿಂದಲೂ ಈ ದರ್ವೇಶಗಳು ಸಾಧು ಸಂತರಂತೆ ತಮ್ಮ ಸುತ್ತಲೂ ತಮ್ಮ ಬಿಡಾರಗಳನ್ನು ಹೂಡಿ ಕಾಬಾದ ಜಗುಲಿ(ಸುಪ್ಪಾ)ಗಳ ಮೇಲೆ ಕುಳಿತು ಭಗವತ್ ಧ್ಯಾನದಲ್ಲಿ ಲೀನರಾಗಿದ್ದವರೇ ಸೂಫಿಗಳೆನಿಸಿಕೊಂಡರು.

ಬಾಗ್ದಾದಿನ ಮತ್ತೊಬ್ಬ ಸೂಫಿಸಾಧಕ ಬಷೀರುಲ್ ಹಾಫಿ ಸೂಫಿಗಳ ಬಗ್ಗೆ ಹೀಗೆನ್ನುತ್ತಾರೆ. 'ದಿ ಸೂಫಿ ಈಜ್ ಹೀ ವೂ ಕೀಪ್ಸ್ ಈಸ್ ಹಾರ್ಟ್ ಪ್ಯೂರ್ ಆ್ಯಂಡ್ ಗೋಯಿಂಗ್ ಬ್ಯಾಕ್ ಟು ಇಟ್ಸ್ ಡಿವೈನ್ ಓರಿಜಿನ್' ಎಂದರೆ ಹೃದಯವನ್ನು ಶುದ್ಧವಾಗಿಟ್ಟುಕೊಂಡು ಅಲ್ಲಾಹ್‌ನನ್ನು ಬಿಟ್ಟು ಬೇರೆ ಯಾವ ಚಿಂತನೆಯೂ ಮಾಡದಂತೆ ಇದ್ದು ಅಂತ್ಯದಲ್ಲಿ ಬಂದ ಇಸ್ಲಾಂಧರ್ಮಕ್ಕಿಂತ ಪೂರ್ವದಲ್ಲಿನ ಫಕೀರರನ್ನು ಹೋಗುವವನೇ ಸೂಫಿ'. ಅವರನ್ನು ದರ್ವೇಶರೆಂದು ಕರೆಯಲಾಗುತ್ತಿತ್ತು. ಇಸ್ಲಾಂ ಧರ್ಮವು ಪ್ರಾರಂಭವಾದಾಗಿನಿಂದ ಅವರು ಆ ಧರ್ಮದಲ್ಲಿ ಪೂರ್ಣ ನಂಬಿಕೆಯನ್ನಿಟ್ಟು ಇದರ ಪ್ರಚಾರಕ್ಕಾಗಿ ತಮ್ಮ ಜೀವನವನ್ನು ಮುಡಿಪಾಡಾಗಿಡಲು ಪಣ ತೊಟ್ಟರಂತೆ.

ಅರಬ್ ದೇಶದಿಂದ ಹೊರಟು ಪ್ರಪಂಚದ ನಾನಾ ದೇಶಗಳಿಗೆ ಧೈರ್ಯವಾಗಿ ಪ್ರಯಾಣ ಮಾಡಿ ಇಸ್ಲಾಂಧರ್ಮವನ್ನು ಶಾಂತ ಹಾಗೂ ಪ್ರೇಮಭಾವದಿಂದ ಜನರಲ್ಲಿ ಹರಡಿಸಿದವರೇ ಸೂಫಿ ಸಂತರು. ಇವರನ್ನು ಆವ್‌ಲಿಯಾ ಎ ಕಿರಾಮ್ ಎಂದೂ ಕರೆಯುವುದುಂಟು. ಸೂಫಿ ಶಬ್ದವು ಯಾರಿಂದ, ಯಾವಾಗ ಹುಟ್ಟಿತೆನ್ನುವುದಕ್ಕೆ ಅವಾರಿಫ್ಯುಲ್‌ಯಾ ಆರಿಫ್‌ನ ಲೇಖಕರಾದ ಶೇಖ್ ಷಯಾಬುದ್ದೀನ್ ಸುಹರ್ವರ್ದಿಯವರ ಅಭಿಪ್ರಾಯದಲ್ಲಿ ಹಜರತ್ ಮುಹಮ್ಮದ್ ಪೈಗಂಬರರ ಮೃತ್ಯುವಿನ ನಂತರ ೨೦೦ ವರ್ಷಗಳಲ್ಲಿ ಈ ಶಬ್ದವು ಹುಟ್ಟಿಕೊಂಡಿತೆನ್ನುತ್ತಾರೆ (ಹಮೀದ್ ೧೯೯೪: ೨೨-೨೪).[೨]

ತಸವ್ವುಫ್ ಸೂಫಿ ಸಾಧಕನಲ್ಲಿರಬೇಕಾದ ಗುಣಧರ್ಮಗಳನ್ನು ತಸವ್ವುಫ್ ಎಂದು ಕರೆಯುತ್ತಾರೆ. ಹಜರತ್ ಖಾಜಾ ಬಂದೇನವಾಜರು ತಸವ್ವುಫನ ಪ್ರಚಂಡ ಪಂಡಿತರಾಗಿದ್ದರು. ಸಾಧಕನ ಜೀವನಕ್ರಮ, ಆತನ ಆಚರಣೆಗಳು ಮುಂತಾದ ಎಲ್ಲ ವಿಚಾರಗಳನ್ನು ತಿಳಿಸುವ ಅನೇಕ ಗ್ರಂಥಗಳನ್ನು ಇವರು ರಚಿಸಿರುವರು. ಅವರ ದೈನಂದಿನ ಪ್ರವಚನ ಕಾರ್ಯಕ್ರಮದಲ್ಲೂ ತಸವ್ವುಫ್‌ನ ಬಗ್ಗೆ ವಿವರಿಸುತ್ತಿದ್ದರು. ಇವರ ಅರ್ಥದಲ್ಲಿ ಯಾವ ಸಾಧಕನು ತನ್ನ ಆತ್ಮವನ್ನು ಪ್ರಾಪಂಚಿಕ ಆಸೆ ಆಮಿಷಗಳಿಂದ ದೂರವಿರಿಸಿ ಸಹೃದಯದವನ್ನಿಟ್ಟುಕೊಂಡಿರುತ್ತಾನೋ ಆತನೇ (ಶುದ್ಧ ಸೂಫಿ) ಸಾಲಿಕ್ ಸೂಫೀ ಎಂದು ಹೇಳುತ್ತಿದ್ದರು. ಸೂಫಿಗಳು ಇಸ್ಲಾಂ ಧರ್ಮದ ಮೂಲಕ ಷರಿಯತ್ ತತ್ವಗಳನ್ನು ಕಟ್ಟುನಿಟ್ಟಾಗಿ ಪಾಲಿಸಿದರೂ ಅವರದೇ ಆದ ಕೆಲವು ಸಿದ್ಧಾಂತಗಳನ್ನು ತತ್ವಗಳನ್ನು ತಮ್ಮ ಆಚರಣೆಗಳಲ್ಲಿ ಅಳವಡಿಸಿಕೊಂಡಿರುವುದು ಇವರ ವಿಶೇಷ. ಇವರಲ್ಲಿ ಅನೇಕ ವರ್ಗ, ಸಂಪ್ರದಾಯ ಮತ್ತು ಫಿರ್ಖಾಗಳಿವೆ. ಎಷ್ಟೇ ವ್ಯತ್ಯಾಸಗಳಿದ್ದರೂ ಇವರೆಲ್ಲರೂ ಇಸ್ಲಾಂ ಜ್ಞಾನ ಮತ್ತು ಪ್ರೇಮ ಮಾರ್ಗಗಳಾಗಿದ್ದು ಖುಲ್ಫಾಯೆ ರಾಷ್‌ದೀನ ನ ಅಂತಿಮ ಖಲೀಫಾ ಹಜರತ್ ಅಲಿಯವರನ್ನು ತಮ್ಮ ಭಾವನಾತ್ಮಕ ಶಕ್ತಿಯ ಕೇಂದ್ರ ಬಿಂದು ಎಂದು ನಂಬಿರುತ್ತಾರೆ. ಎಲ್ಲ ಸೂಫಿ ಸಂಪ್ರದಾಯ, ವರ್ಗಗಳಿಗೂ ಸೂಫಿ ಆಧ್ಯಾತ್ಮಿಕ ಪ್ರೇರಕರಾಗಿದ್ದಾರೆ. ಹಜರತ್ ಅಲಿಯವರು ಕ್ರಿ.ಶ. ೬೫೬ರಿಂದ ೬೬೬ ರವರೆಗೆ ಇಸ್ಲಾಂ ಸಾಮ್ರಾಜ್ಯದ ದಕ್ಷ ಖಲೀಫರಾಗಿ ಇತಿಹಾಸದಲ್ಲಿ ಪ್ರಸಿದ್ಧರಾಗಿದ್ದಾರೆ (ಹಮೀದ್ ೧೯೯೪: ೨೫).[೨]

ತಸವ್ವುಫ್, ಧರ್ಮದ ತಿರುಳು ಉತ್ತಮ ಚಾರಿತ್ರ್ಯದ ಸಾರ ಮತ್ತು ಸತ್ಯ ವಿಶ್ವಾಸದ ಸಂಪೂರ್ಣತೆ ಆಗಿದೆ. ಇದರ ಬುನಾದಿ ಶರಿಯತ್, ಕುರಾನ್ ಮತ್ತು ಅಂದಿನ ಇದರ ಚಿಲುಮೆಗಳು, ತಸವ್ವುಫ್‌ನ ಮೂಲ

ಉದ್ದೇಶ ಸತ್ಯದ ಶೋಧನೆ. ಇದರಲ್ಲಿ ನಾಲ್ಕು ದರ್ಜೆಗಳಿವೆ. ೧. ಷರಿಯತ್ ೨. ಶರೀಖತ್, ೩. ಮಾರಿಫತ್ ಮತ್ತು ಹಕೀಕತ್. ೧. ಷರಿಯತ್ ಪ್ರಥಮ ಮಜಲು. ಇದರಲ್ಲಿ ಇಸ್ಲಾಮಿನ ಎಲ್ಲಾ ಕಡೆಯ ವಿಧಿಗಳ ಪಾಲನೆ ಅವಶ್ಯಕವಾಗಿರುತ್ತದೆ. ಇಲ್ಲಿ ಕೇವಲ ನಮಾಜ್, ಉಪವಾಸ ವ್ರತದ ಆಚರಣೆಗಳಷ್ಟೇ ಅಲ್ಲದೆ, ಚಾರಿತ್ರ್ಯ ಉನ್ನತೀಕರಣವೂ ಕಡ್ಡಾಯವಾಗಿರುತ್ತದೆ. ವ್ಯಕ್ತಿ ಪ್ರಪ್ರಥಮವಾಗಿ ಉನ್ನತ ಚಾರಿತ್ರ್ಯ ನೈತಿಕತೆಗಳನ್ನು ಹೊಂದಿದವನಾಗಿರಬೇಕು. ಚಿತ್ತದ ಲೋಪದೋಷಗಳಿಂದ ದೂರವಿರಬೇಕು. ದ್ವೇಷ, ಅಸೂಯೆ, ಕೋಪ, ಅಹಂಕಾರ, ನಟ ಮೋಸ ಸ್ವಾರ್ಥ ಮೊದಲಾದ ಸೈತಾನನ ಪ್ರಲೋಭನೆಗಳಿಂದ ಹೃದಯುವನ್ನು ಶುಭ್ರವಾಗಿಡಬೇಕಾಗುತ್ತದೆ. ಮಾನವ ಸೇವೆ ಷರಿಯತ್‌ನ ಭಂಡಾರದ ಕೀಲಿಯಾಗಿದೆ (ಅಲಿ ೨೦೦೪: ೨).[೨೮] ಪ್ರಮುಖ ನಂಬಿಕೆಗಳು ಇವರ ಪ್ರಕಾರ ತಸವ್ವುಫ್‌ನ ಕೆಲವು ಲಕ್ಷಣಗಳನ್ನು ಸೂಫಿ ಸಂತರು ತಮ್ಮ ಸಾಧನೆಯಲ್ಲಿ ಅಳವಡಿಸಿಕೊಳ್ಳುತ್ತಾರೆ.

೧. ಈ ಸೃಷ್ಟಿಯ ಚರಾಚರ ವಸ್ತುಗಳಲ್ಲಿ ಪರಮಾತ್ಮ(ಅಲ್ಲಾಹ್)ನ ಅಸ್ತಿತ್ವವಿದೆ. ಈ ಎಲ್ಲ ವಿಶ್ವವೂ ಆ ಪರಮಾತ್ಮನಲ್ಲಿದೆ.

೨. ಪರಮಾತ್ಮನಲ್ಲದೆ ಈ ಸೃಷ್ಟಿಯನ್ನು ಮತ್ತ್ಯಾರೂ ಮಾಡಲಾರರು ಹಾಗೂ ಆತನ ಅನುಮತಿ ಇಲ್ಲದೆ ಒಂದು ಹುಲ್ಲು ಕಡ್ಡಿಯೂ ಅಲುಗಾಡಲಾರದು.

೩. ಜಗತ್ತಿನ ಎಲ್ಲ ಮತ ಧರ್ಮಗಳೂ ಒಂದೇ ಸತ್ಯದತ್ತ ಅಂದರೆ ಮೋಕ್ಷ ಸಾಧನೆಯ ಸಾಗಿಸುವ ಹಾಗೂ ಒಂದೇ ಇಂಗಿತವನ್ನು ಹೊಂದಿವೆ. ಅದನ್ನು ವ್ಯಕ್ತಪಡಿಸುವ ಮಾರ್ಗಗಳು ಬೇರೆ ಬೇರೆಯಾಗಿರುತ್ತವೆ.

೪. ಮಾನವನು ಕರ್ಮದ ಅಧೀನನಲ್ಲ. ತಾನು ಇಷ್ಟಪಟ್ಟರೆ ಕರ್ಮಗಳನ್ನು ತನ್ನ ಅಧೀನದಲ್ಲಿಡಬಲ್ಲನು.

೫. ಮೃತ್ಯು ಅನಿವಾರ್ಯ ಹಾಗೂ ನಿಶ್ಚಿತವಾಗಿದೆ. ಮೃತ್ಯುವಿಗೆ ಹೆದರಿ ಕುಳಿತುಕೊಳ್ಳುವವ ಈ ಜಗತ್ತಿನಲ್ಲಿ ಏನನ್ನೂ ಸಾಧಿಸಲಾರ. ಎಲ್ಲಿದ್ದರೂ ಮೃತ್ಯುವನ್ನು ತಪ್ಪಿಸಿಕೊಳ್ಳಲಾಗದಿದ್ದ ಮೇಲೆ ಈ ಜಗತ್ತಿನಲ್ಲಿ ಎಲ್ಲಿ ಬೇಕಾದರೂ ಓಡಾಡಿಕೊಂಡು ಕಾರ್ಯಪ್ರವೃತ್ತನಾಗುವುದೇ ಮಾನವನ ಧರ್ಮ.

೬. ಹೇಗೆ ಎಲ್ಲ ವಸ್ತುಗಳಿಗೂ ಒಂದೇ ತತ್ವದಿಂದ ಹೊರಟಿವೆಯೋ ಹಾಗೆಯೇ ಎಲ್ಲ ವಸ್ತುಗಳು ಅದೇ ತತ್ವದಲ್ಲಿ ಸೇರಲು ತವಕಿಸುತ್ತವೆ.

೭. ಸತ್ಯದರ್ಶನಕ್ಕೆ ತರ್ಕದ ಅವಶ್ಯಕತೆ ಇರುವುದಿಲ್ಲ. ಇದಕ್ಕೆ ಪ್ರೇಮಭಾವನೆ ಮತ್ತು ತತ್ವಾನುಭೂತಿಯ ಅವಶ್ಯಕತೆ ಇರುತ್ತದೆ.

೮. ಪ್ರೇಮವೇ ತತ್ವಾನುಭೂತಿ. ಇದರಿಂದ ಈ ಜಗತ್ತಿನ ಎಲ್ಲ ಸಮಸ್ಯೆಗಳನ್ನು ಗೆಲ್ಲಬಹುದು. ಪ್ರೇಮವೇ ಅಲ್ಲಾಹ್‌ನ ಪ್ರತಿಬಿಂಬ. ಪ್ರೇಮವಿಲ್ಲದೆ ಶುಷ್ಕ ಬೌದ್ಧಿಕ, ವೈಜ್ಞಾನಿಕ ಕಾರ್ಯಗಳೆಲ್ಲೂ ವ್ಯರ್ಥ. ಈ ಬೌದ್ಧಿಕ ಚಿಂತನೆಯಲ್ಲಿ ಬಿದ್ದವನ ಜೀವನ ಅಂಧಕಾರದಲ್ಲಿ ಆತ್ಮವನ್ನು ಅಲ್ಲಾಹ್‌ನಲ್ಲಿ ಏಕಾಕಾರಗೊಳಿಸುವ ಸಾಧನೆಯಲ್ಲಿ ತೊಡಗದ ಭಕ್ತಿ, ಪ್ರಾರ್ಥನೆಗಳು ವ್ಯರ್ಥ.

೯. ಸಂಗೀತವು ಮಾನವನನ್ನು ಅಲ್ಲಾಹನಲ್ಲಿ ಏಕಾಕಾರಗೊಳಿಸಲು ಸಹಾಯಕವಾಗುತ್ತದೆ. ಆದರೆ ಅದು ಮಾದಕತೆಯಿಂದ ಕೂಡಿರಬಾರದು. ಶುದ್ಧ ದೈವ ಭಕ್ತಿಪೂರ್ವಕ ಶಬ್ದಗಳಿಂದ ಕೂಡಿದ್ದ ಮಧುರವಾದ ಭಾವನೆಗಳೊಂದಿಗೆ ಆವೇಶ ಬರಿಸುವಂತಿರಬೇಕು. ಇವು ಸಮಾಅ ಎಂದು ಕರೆಯಲ್ಪಟ್ಟು ಸೂಫಿಗಳಲ್ಲಿ ಸ್ವೀಕೃತಿಯಾಗಿದ್ದು ಇಂತಹ ಹಲವಾರು ವಿಚಾರಗಳನ್ನು ಜನತೆಯಲ್ಲಿ ಬಿತ್ತಲು ಬಂದೇನವಾಜ್‌ರ ಕೊಡುಗೆ ಅವಿಸ್ಮರಣೀಯವಾಗಿದೆ (ಹಮೀದ್ ೧೯೯೪: ೨೯.೩೦).[೨೯]

ದೀಕ್ಷೆ(ಬೈಯತ್) ಮತ್ತು ಉಪದೇಶಗಳು ಪ್ರತಿಯೊಬ್ಬ ಇಸ್ಲಾಂ ಧರ್ಮೀಯನು ಅಥವಾ ಸೂಫಿ ಸಂತರ ಮುರಿಧ್(ಅನುಯಾಯಿ)ಗಳು ದೀಕ್ಷೆಯನ್ನು ಪಡೆಯುತ್ತಿದ್ದು, ನಂತರ ಖಾಜಾ ಬಂದೇನವಾಜ್‌ರು ಉಪದೇಶಿಸಿದ ವಿಚಾರಗಳನ್ನು ತಮ್ಮ ವೈಯಕ್ತಿಕ ಬದುಕಿನಲ್ಲಿ ಅಳವಡಿಸಿಕೊಳ್ಳಬೇಕಾಗಿತ್ತು. ಹಜರತ್ ಖಾಜಾ ಸಾಹೇಬರ ಶಿಷ್ಯತ್ವವನ್ನು ಬಯಸಿದವರು ಮೊದಲು ಅವರಿಂದ ದೀಕ್ಷೆಯನ್ನು ಪಡೆಯಬೇಕಾಗಿತ್ತು. ಅದನ್ನು 'ಬೈಯತ್' ಎನ್ನುತ್ತಾರೆ. ಸೂಫಿ ನಿಯಮಗಳ ಪ್ರಕಾರ ಗುರುಗಳ ಬಲಗೈಯಲ್ಲಿ ಶಿಷ್ಯನು ತನ್ನ ಬಲಗೈಯನ್ನಿಟ್ಟು ಈ ರೀತಿ ಪ್ರಮಾಣವನ್ನು ಮಾಡಬೇಕಿತ್ತು.

೧. ನಾನು ಜಗದ ರಕ್ಷಕನಾದ ಅಲ್ಲಾಹ್‌ನ ಸಾಕ್ಷಿಯಾಗಿ ಪರಂಪರಾಗತ ಖಾಜಾ ಪರಂಪರೆಯಲ್ಲಿ ಪೂರ್ಣ ವಿಶ್ವಾಸವನ್ನು ನನ್ನ ಗುರುವಾರ್ಯರನ್ನು ಹೃದಯಪೂರ್ವಕವಾಗಿ ಗೌರವಿಸುತ್ತೇನೆ ಹಾಗೂ ಅವರ ಆಜ್ಞೆಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತೇನೆ.

೨. ನನ್ನ ನಾಲಿಗೆಯನ್ನು ಸಂಪೂರ್ಣವಾಗಿ ಹಿಡಿತದಲ್ಲಿಟ್ಟುಕೊಂಡು ವ್ಯರ್ಥಮಾತುಗಳಿಂದ ದೂರವಿದ್ದು, ಸದಾ ಅಲ್ಲಾಹ್‌ನ ನಾಮಸ್ಮರಣೆಯಲ್ಲಿ ನಿರತನಾಗಿರುತ್ತೇನೆ.

೩. ಷರಿಯತ್ ಮಾರ್ಗವನ್ನು ಎಂತಹ ಸಂದರ್ಭದಲ್ಲಿ ತಪ್ಪಿಸಿ ನಡೆಯುವುದಿಲ್ಲವೆಂದು ಹೃದಯಪೂರ್ವಕವಾಗಿ ಪ್ರಮಾಣ ಮಾಡುತ್ತೇನೆ. ಈ ಪ್ರಮಾಣ ಮಾಡಿದ ಕುರುಹಾಗಿ ನಫಿಲ್ ನಮಾಜ್ ಪ್ರಾರ್ಥನೆಯನ್ನು ಶಿಷ್ಯರು ಸಲ್ಲಿಸುವರು ಎಂಬ ವಿಚಾರಗಳು ಲೇಖಕರು ತಮ್ಮ ಖಾಜಾ ಬಂದೇನವಾಜ್ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ಅದಲ್ಲದೇ ದೀಕ್ಷೆಯನ್ನು ಹೊಂದಿದ ಮುರಿದ್ ಅನುಯಾಯಿಗಳಿಗೆ ಕೆಲವು ಪ್ರಮುಖ ಅಂಶಗಳನ್ನು ಉಪದೇಶಿಸಿದ್ದುಂಟು(ಹಮೀದ್ ೧೯೯೪: ೪೬-೪೭).[೩೦]

ಇಸ್ಲಾಂ ಧರ್ಮದಲ್ಲಿ ಕೇವಲ ಪುರುಷರಲ್ಲದೇ ಮಹಿಳೆಯರು ಕೂಡ ಬಂದೇನವಾಜ್‌ರ ಶಿಷ್ಯತ್ವವನ್ನು ಪಡೆಯಲು ದೀಕ್ಷೆಯನ್ನು ಪಡೆಯುತ್ತಿದ್ದರು. ಆದರೆ ಹೆಣ್ಣುಮಕ್ಕಳಿಗೆ ದೀಕ್ಷೆ ಕೊಡುವ ವಿಧಾನ ಪುರುಷರಿಗಿಂತ ಭಿನ್ನವಾಗಿರುವುದನ್ನು ಕಾಣುತ್ತೇವೆ. ಈ ತಾರತಮ್ಯ ಯಾವ ಕಾರಣಕ್ಕಾಗಿಯೋ ತಿಳಿಯುವುದಿಲ್ಲ. ಒಂದು ನೀರು ತುಂಬಿದ ಪಾತ್ರೆಯನ್ನು ಖಾಜಾ ಬಂದೇನವಾಜ್‌ರು ತಮ್ಮ ತೋರುಬೆರಳಿಗೆ ಬಟ್ಟೆಯನ್ನು ಸುತ್ತಿ ಆ ಬೆರಳನ್ನು ನೀರಿನಲ್ಲಿ ಅದ್ದುತ್ತಿದ್ದರು. ದೀಕ್ಷೆ ಸ್ವೀಕರಿಸಲು ಬಂದ ಹೆಣ್ಣುಮಗಳೂ ಗುರುಗಳಾದ ಖಾಜಾ ಬಂದೇನವಾಜ್‌ರು ಮಾಡಿದ ಹಾಗೆಯೇ ಮಾಡಬೇಕಾಗುತ್ತಿತ್ತು. ಅನಂತರ ದೀಕ್ಷಾ ವಿಧಾನಗಳನ್ನು ವಿಧಿವತ್ತಾಗಿ ನೆರವೇರಿಸುತ್ತಿದ್ದರು. ಆ ಪಾತ್ರೆಯ ನೀರನ್ನು ಆ ಹೆಣ್ಣುಮಗಳಿಗೆ ಕುಡಿಯಲು ಹೇಳುತ್ತಿದ್ದರು. ಆಮೇಲೆ ದೀಕ್ಷಿತಳಾತ ಹೆಣ್ಣುಮಗಳ

ತಲೆಗೆ ವಸ್ತ್ರವನ್ನು ಕಟ್ಟುತ್ತಿದ್ದರು. ಹೆಣ್ಣುಮಗಳು ತೀರ ಸಾಂಪ್ರದಾಯಿಕ ಮನೆತನದವಳಾಗಿದ್ದು ಮುಸುಕಿನಲ್ಲಿಯೇ ಇರುತ್ತಿದ್ದರೆ, ಆ ಸಂಪ್ರದಾಯಕ್ಕೆ ಯಾವುದೇ ಭಂಗ ಬರದಂತೆ ನಡುವೆ ಪರದೆಯನ್ನು ಹಿಡಿದು ದೀಕ್ಷಾ ವಿಧಿಯನ್ನು ಮುಗಿಸುತ್ತಿದ್ದರು. ಹೆಣ್ಣುಮಕ್ಕಳಿಗೆ ದೀಕ್ಷೆಯನ್ನು ಕೊಟ್ಟರೂ ದರ್ಗಾದ ಒಳಗಡೆ ಬಿಡದೇ ಇರುವುದು ಆಶ್ಚರ್ಯವೆ. ದೀಕ್ಷೆಯ ನಂತರ ಉಪದೇಶಗಳು ಈ ಕೆಳಗಿನಂತಿವೆ.

೧. ಮಾನವ ಜಾತಿ ಒಂದೇ ಎಂದು ತಿಳಿದರೆ ದೇಶದಲ್ಲಿ ಯಾವುದೇ ಕಾರಣಕ್ಕೂ ಕಲಹ ಕದನಗಳು ನಡೆಯಲಾರವು. ಜಾತಿ ಹೆಸರಿನಲ್ಲಿ ನಡೆಯುವ ವೈಷಮ್ಯಗಳು ವಿರಸದ ಬೇರುಗಳು ಕೂಡ ಇಲ್ಲವಾಗಬಹುದು.

೨. ಅಲ್ಲಾ ಒಬ್ಬನೇ. ಅಂದರೆ ಪರಮಾತ್ಮ ಒಬ್ಬನೇ ಎಂದು ನಂಬಬೇಕು. ಹೆಸರು ಹಲವಾಗಿದ್ದರೂ ಆ ದೇವರ ಸತ್ಯ ಒಂದೇ ಆಗಿರುತ್ತದೆ. ಆ ಒಬ್ಬ ದೇವರಲ್ಲಿ ಮಾತ್ರ ಶ್ರದ್ಧೆ ಇರಬೇಕು. ಒಬ್ಬ ದೇವರನ್ನೇ ಸ್ತುತಿಸಬೇಕು. ಆ ದೇವನ ಇಚ್ಛೆಯಿದ್ದಂತೆ ನಮ್ಮೆಲ್ಲರ ಬದುಕು ರೂಪುಗೊಂಡಿದೆ ಎಂಬುದರಲ್ಲಿ ವಿಶ್ವಾಸವಿರಬೇಕು. ತಮ್ಮನ್ನು ಸಂಪೂರ್ಣವಾಗಿ ದೈವತ್ವಕ್ಕೆ ಸಮರ್ಪಿಸಿಕೊಳ್ಳಬೇಕು.

೩. ಮಹಾತ್ಮ ಮಹ್ಮದ್ ಪೈಗಂಬರರು ಹಾಕಿಕೊಟ್ಟ ಮಾರ್ಗದಲ್ಲಿ ನಡೆಯಬೇಕು. ಪರಮಾತ್ಮನೇ ಕಳುಹಿಸಿದ ನಿಜವಾದ ಪ್ರವಾದಿ ನಾನು ಎಂಬ ನಂಬಿಕೆ, ಗೌರವವನ್ನು ಬೆಳೆಸಿಕೊಳ್ಳಬೇಕು.

೪. ನಮ್ಮ ಜೀವನಕ್ಕೆ ಬೆಳಕು ನೀಡುವ ವಸ್ತುಗಳು ಎರಡೆಂಬುದನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕು. ಒಂದು ಖುರಾನ್ ಪಠಣ. ಇನ್ನೊಂದು ಪ್ರವಾದಿ ಪೈಗಂಬರರು ಹೇಳಿದ ಉಪದೇಶಗಳಂತೆಯೇ ನಡೆದುಕೊಳ್ಳುವುದು ನಮ್ಮೆಲ್ಲರ ಧರ್ಮವೆಂದು ತಿಳಿಯಬೇಕು.

೫. ಪ್ರವಾದಿಗಳ ಮಾರ್ಗದರ್ಶನದಂತೆ ಉತ್ತಮಿಕೆಯನ್ನು ಬೆಳೆಸಿಕೊಂಡ ಪ್ರತಿಯೊಬ್ಬರೂ ದೇವರ ಸ್ಮರಣೆಯನ್ನು ಮರೆತಿರುವುದಿಲ್ಲ. ಅಂತರಂಗದ ಶುದ್ಧತೆಯುಳ್ಳ ಇಂಥವರಿಂದ ಲೋಕಕ್ಕೆ ಯಾವುದೇ ಹಾನಿ ಆಗಲಾರದು.

೬. ಆರೋಗ್ಯಪೂರ್ಣ ಮನಸ್ಸು ಹೊಂದಿದ ದೇಹವು ಯಾವಾಗಲೂ ಒಳ್ಳೆಯ ವಿಚಾರವನ್ನೇ ಮಾಡುತ್ತದೆ. ಹಾಗಾಗಲು ಹಂಬಲಿಸಬೇಕು.

೭. ನಾವು ತೆಗೆದುಕೊಳ್ಳುವ ಆಹಾರದ ಬಗ್ಗೆ ಪವಿತ್ರ ಭಾವನೆಯನ್ನು ಬೆಳೆಸಿಕೊಳ್ಳಬೇಕು. ನಮ್ಮ ದೇಹಕ್ಕೆ ರಕ್ಷಣೆ ಒದಗಿಸುವ ಅನ್ನ ಅದು ದೇವರ ಪ್ರಸಾದ ಎಂಬ ಭಾವನೆ ಆಹಾರ ಪಡೆಯುವವರಲ್ಲಿ ಇರಬೇಕು. ಮಿತವಾದ ಶುಚಿಯಾದ ಆಹಾರಸೇವನೆಯಿಂದ ದೇಹಕ್ಕೆ ರೋಗ ಬರಲಾರದು. ದಿನಕ್ಕೆ ಎರಡು ಸಾರಿ ಮಾತ್ರ ಉಣ್ಣುವುದನ್ನು ರೂಢಿಸಿಕೊಳ್ಳಬೇಕು.

೮. ರಾತ್ರಿ ನಿದ್ರೆಗಾಗಿಯೇ ಇರುತ್ತದೆ ಎಂಬ ಭ್ರಮೆ ಇರಬಾರದು. ರಾತ್ರಿಯ ಒಂದನೇ ನಾಲ್ಕಂಶ ಸಮಯ ಮಾತ್ರ ನಿದ್ರೆಗೆ ಮೀಸಲಾಗಿರಬೇಕು. ಉಳಿದ ಅಮೂಲ್ಯ ವೇಳೆಯನ್ನು ಕೆಲವು ಆಚರಣೆಗಳಿಗಾಗಿ ಮೀಸಲಿಡಬೇಕು. ರಾತ್ರಿಯ ಒಂದು ಆಯಾಮವನ್ನು ಅಲ್ಲಾನ ಪ್ರಾರ್ಥನೆ, ಕುರಾನ್ ಮತ್ತಿತರ ತತ್ವಜ್ಞಾನ, ಧಾರ್ಮಿಕ ಗ್ರಂಥಗಳನ್ನು ಓದುವುದಕ್ಕಾಗಿ ಮೀಸಲು ಇಡಬೇಕು. ಏಕಾಂತದಲ್ಲಿ ಹೀಗೆ ಮಾಡುವುದರಿಂದ ಹೆಚ್ಚು ಪ್ರಯೋಜನ ಆಗುತ್ತದೆ.

ರಾತ್ರಿಯ ಇನ್ನೊಂದು ಆಯಾಮವನ್ನು ಓದಿದ ತತ್ವಜ್ಞಾನದ ಚರ್ಚೆ ಮಾಡಬೇಕು. ಸಾಧ್ಯವಾದಷ್ಟು ಸತ್ಸಂಗದಲ್ಲಿ ಕಾಲ ಕಳೆಯಬೇಕು. ಇಂಥದಕ್ಕೆ ಖಾಜಾ ಬಂದೇನವಾಜ್‌ರು ಅರೆನಿದ್ರಾವಸ್ಥೆ ಎಂದು ಕರೆಯುತ್ತಾರೆ.

೯. ಹದವಾದ ಹಿತವಾದ ಮಿತವಾದ ಮಾತುಗಳನ್ನಾಡಬೇಕು. ಮಾತಿನಲ್ಲಿ ಸಂಯಮ ಸೌಮ್ಯತೆ ಬೇಕು. ಅಜ್ಞಾನಿಗಳ ಜೊತೆಗೆ ಮಾತನ್ನು ಬೆಳೆಸಬಾರದು. ಇದರಿಂದ ಅಪಾಯವೇ ಹೆಚ್ಚು. ನಿರಂತರ ದೇವರ ಧ್ಯಾನದಲ್ಲಿ ತೊಡಗಿದಾಗ ಮಾತ್ರ ಹೀಗೆಲ್ಲ ಮಾಡಲು ಸಾಧ್ಯವಾಗುತ್ತದೆ. ಸಾಧನೆ ಮಾಡಿದ ಮಾತ್ರಕ್ಕೆ ದೇವರಿಗಿಂತ ದೊಡ್ಡವರು ಆಗಲಾರೆವು. ಆ ದೇವರ ಮುಂದೆ ನಾವೆಲ್ಲ ಸಣ್ಣವರು ಎಂಬ ಭಾವನೆ ಇರಬೇಕು. ೧೨ನೇ ಶತಮಾನದಲ್ಲಿ ಜಗತ್‌ಜ್ಯೋತಿ ಬಸವಣ್ಣನವರ ವಚನ 'ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂಬುದನ್ನು ಇಲ್ಲಿ ಸ್ಮರಿಸಬಹುದು. ಅನುಭಾವಿಗಳ ಚಿಂತನಾಕ್ರಮ ಒಂದೇ ರೀತಿಯಾಗಿರುತ್ತದೆ.

೧೦. ಶಿಷ್ಯನಾಗಬಯಸುವವನಲ್ಲಿ ಆತ್ಮಗೌರವ, ಅಭಿಮಾನ ಇರಬೇಕು. ಆ ಅಭಿಮಾನ ದುರಹಂಕಾರವಾಗಬಾರದು.

೧೧. ಗುರುಗಳಿಂದ ದೀಕ್ಷೆ ಸ್ವೀಕರಿಸಿ ಗುರುವಾದೆ ಎಂಬ ಕಾರಣಕ್ಕಾಗಿ ಬಂಧುಗಳಿಗೆ ಸುತ್ತಮುತ್ತಲಿನವರಿಗೆ ಊಟವನ್ನು ಹಿಡಿದುಕೊಂಡು ಯಾವ ವಿಷಯಕ್ಕೂ ಭಾರವಾಗಬಾರದು.

೧೨. ಆಡಂಬರದ ಜೀವನಕ್ಕೆ ಮಾರು ಹೋದವರ ಸಂಗದಿಂದ ಬಹುದೂರವಿರಬೇಕು.

೧೩. ನಮ್ಮ ಸ್ವಭಾವದಲ್ಲಿ ಸರಳತೆ ಸೌಮ್ಯತೆಗೆ ಹೆಚ್ಚಿನ ಪ್ರಾಶಸ್ತ್ಯ ಕೊಡಬೇಕು.

೧೪. ತಪ್ಪಿಲ್ಲದೇ ಯಾರಿಗೂ ತಲೆಬಾಗುವ ಅಗತ್ಯವಿಲ್ಲವಾದರೂ ಸದುವಿನಯವನ್ನು ಮರೆಯಬಾರದು. ಸದಾಶಿವನ ಒಲುಮೆಗೆ ನಮ್ರತೆಯೇ ಕಾರಣವಾಗುತ್ತದೆ. ಬಸವಣ್ಣನವರು ಹೇಳಿದ್ದು ಇದನ್ನೇ, 'ಮೃದುವಚನವೇ ಸಕಲ ಜಪತಪ' 'ಸದುವಿನಯವೇ ಸದಾಶಿವನ ಒಲುಮೆ'. ಈ ತಂತ್ರವನ್ನು ಪ್ರತಿಯೊಬ್ಬ ಶಿಷ್ಯ ಅಳವಡಿಸಿಕೊಂಡು ನಡೆಯಬೇಕು.

೧೫. ಮತ್ತೊಬ್ಬರನ್ನು ಕಾರಣವಿಲ್ಲದೇ ನೋಯಿಸಬಾರದು. ಹಾಸ್ಯ, ಟೀಕೆ ಮುಂತಾದವುಗಳನ್ನು ಮಾಡಬಾರದು. ಬಸವಣ್ಣನವರು ಕೂಡ 'ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ' ಎಂದಿದ್ದಾರೆ. ಖಾಜಾ ಬಂದೇನವಾಜರು ಉಪದೇಶಿಸಿದ ಉಪದೇಶಗಳೆಲ್ಲ ಮೌಲ್ಯಯುತವಾಗಿವೆ. ಯಾವುದೇ ಜಾತಿಯ ವಿಷಮತೆಯನ್ನು ಅಡ್ಡ ತರದೇ ವ್ಯಕ್ತಿತ್ವವನ್ನು ವಿಕಾಸ ಮಾಡಿಕೊಳ್ಳುವ ಸಂದರ್ಭದಲ್ಲಿ ಅವರ ಚಿಂತನೆಗಳನ್ನು ಆದರ್ಶವಾಗಿಸಿಕೊಳ್ಳಬಹುದಾಗಿದೆ (ದಂಡೆ ೨೦೦೮: ೩೬-೪೨).[೨೦]

**'ಫನಾ' ಮತ್ತು 'ಬಖಾ'**

ಫನಾ ಮತ್ತು ಬಖಾ ತತ್ವಗಳೆರಡು ಸೂಫಿ ಸಾಧನೆಯ ಅಂತಿಮ ಪರಿಣಾಮಗಳು. ಸೂಫಿ ಲೇಖಕರಾದ ಹಜರತ್ ಅಲಿ ಹುಜ್ವೇರಿಯವರು ತಮ್ಮ ಗ್ರಂಥ 'ಕಶ್ಫುಲ್' ಮಹಜೂಬ್‌ನಲ್ಲಿ ಸೂಫಿಗಳ ಪ್ರಮುಖ ಹನ್ನೆರಡು ಪಂಗಡಗಳನ್ನು ಹೆಸರಿಸಿದ್ದಾರೆ. ಅವುಗಳಲ್ಲಿನ ಎಂಟನೇ ಫಿರ್ಖಾ(ಪಂಗಡ) ಖರೀಜಿಯ ಫಿರ್ಖಾ ಎಂದಿದೆ. ಈ

ಪಂಗಡದ ಪ್ರಧಾನ ಪೀರ್‌ಗಳಾದ ಹಜರತ್ ಅಬುಸಯೀದಾ ಖರಾಜಿಯವರು ತಮ್ಮ ಪಂಗಡದ ಮುರಿದೇ (ಶಿಷ್ಯರು)ಗಳಿಗೆ 'ಫನಾ' ಮತ್ತು 'ಬಖಾ' ತತ್ವಗಳಲ್ಲಿ ವಿಶ್ವಾಸವಿಡಲು ಹಾಗೂ ಪರಿಪಾಲನೆಗೆ ಆಜ್ಞಾಪಿಸಿದ್ದಾರೆ. ಈ ತತ್ವಗಳು ಇಸ್ಲಾಂನ ಷರಿಯತ್ ತತ್ವಕ್ಕನುಗುಣವಾಗಿರುವುದರಿಂದ ಇವರ ನಂತರ ಬಂದ ಎಲ್ಲ ಸೂಫಿ ಸಂತರು ಪ್ರಧಾನ ಗುರುಗಳು ಇದನ್ನು ಪೂರ್ಣವಾಗಿ ನಂಬಿ ತಮ್ಮ ಶಿಷ್ಯರಿಗೂ ಬೋಧಿಸಿದ್ದಾರೆ.

'ಫನಾ' ಎಂದರೆ ಸಾಮಾನ್ಯ ಅರ್ಥದಲ್ಲಿ 'ನಾಶ' ಎನ್ನಬಹುದು. ಆದರೆ ಸೂಫಿ ಸಿದ್ಧಾಂತದಲ್ಲಿ ಇದರ ಸ್ಥಾನ ಹೆಚ್ಚು ವ್ಯಾಪಕವಾದುದು. ನಮ್ಮ ಈ ಜಗತ್ತು ನಾಶವಾದಂತೆ ತೋರಿದರೂ ಅದರ ಅಸ್ತಿತ್ವ ಅದರ ಸ್ಥಿರತೆ ಇದ್ದೇ ಇದೆ. ಮುಂದೆಯೂ ಸಹ ಇರುತ್ತದೆ. ಬಾಕಿ ಉಳಿದಿರುವುದೇ 'ಬಖಾ' ತತ್ವ. ಐನ್‌ಸ್ಟೀನ್ ವಿಜ್ಞಾನಿಯೂ ಸಹ ಇದರಿಂದ ಪ್ರೇರಿತನಾಗಿ ಜಗತ್ತಿನ ಯಾವ ವಸ್ತುವಿಗೂ ನಾಶವಿಲ್ಲ ಎಂದಿದ್ದಾನೆ. ಈ ಜಗತ್ತು ನಾಶವಾಗುತ್ತಲೇ ಜೀವಂತವಾಗಿರುವಂತಹ ಒಂದು ಪ್ರಕ್ರಿಯೆ. ನಾಶದೊಂದಿಗೆ ಸೃಷ್ಟಿಕಾರ್ಯ ನಡೆಯುತ್ತಲೇ ಇರುತ್ತದೆ. ಈ ಶಾಶ್ವತ ತತ್ವವನ್ನು ಸೂಫಿ ಸಂತರು ತಮ್ಮದೇ ಆದ ರೀತಿಯ ತಮ್ಮ ಸಾಧನಾ ಪಥಕ್ಕೆ ಅಳವಡಿಸಿಕೊಂಡಿರುತ್ತಾರೆ.

ಕುರಾನ್‌ನಲ್ಲಿಯೂ ಸಹ ಇದರ ಬಗ್ಗೆ ಉಲ್ಲೇಖವಿದೆ. ''ಕುಲ್ಲುಮನ್ ಅಲೈಹಾ ಫನ್ನಿನ್‌ವ ಯುಬಖಾವಜಹು ರಬ್ಬೆಕ ಜುಲ್ ಜಲಾಲಿವಲ್ ಇಕ್ರಾಮ್'' ಎಂದರೆ ಈ ಸೃಷ್ಟಿಯಲ್ಲಿನ ಎಲ್ಲವೂ ನಾಶವಾಗಿ ನಿನ್ನ ಜಾತ್ ಪ್ರಕೃತಿ ಮಾತ್ರ ಬಾಕಿ ಉಳಿದೇ ಇರುತ್ತದೆ ಎನ್ನುವ ಮಾತಿನಲ್ಲಿನ ಅರ್ಥವನ್ನು ಅನೇಕ ವಿಜ್ಞಾನಿಗಳು ನಂಬಿ ವ್ಯಾಪಕವಾಗಿ ವಿಶ್ಲೇಷಿಸಿದ್ದಾರೆ. ಕುರಾನಿನಲ್ಲಿ ಉಕ್ತನಾಗಿರುವ 'ಫನಾ' ಮತ್ತು 'ಬಖಾ' ತತ್ವಗಳನ್ನು ಸೂಫಿಗಳು ತಮ್ಮ ಸಾಧನಾ ಪಥದಲ್ಲಿ ಹೀಗೆ ಅಳವಡಿಸಿಕೊಂಡಿದ್ದಾರೆ. ತನ್ನಲ್ಲಿರುವ ಮಾನವ ಸಹಜ ಪಾಶವಿಕ ಗುಣಗಳನ್ನು ನಾಶಪಡಿಸಿಕೊಂಡು ಅಲ್ಲಾಹನ ಸತ್ಯತೆಯ ಬಗ್ಗೆ ದೃಢವಾಗಿ ನಂಬಬೇಕು. ಮಾನಸಿಕ ಆಸೆ ಆಕಾಂಕ್ಷೆಗಳನ್ನು ತ್ಯಜಿಸಿ ಪ್ರಾಪಂಚಿಕ ತತ್ವವನ್ನು ಪೂರ್ಣವಾಗಿ ನಾಶಪಡಿಸಿಕೊಂಡಾಗ ಆತನು 'ಫನಾ' ಹಂತಕ್ಕೆ ತಲುಪಿದನೆಂದು ನಂಬುವರು. ಆದರೂ 'ಆತ್ಮ'(ರೂಹ್)ವೆಂಬ ಅಂಶ ಆ ಶರೀರಲ್ಲಿ 'ಬಾಕಿ' ಉಳಿದಿರುತ್ತದೆ. ಆ ಶಕ್ತಿಶಾಲಿ ಆತ್ಮವೇ 'ಬಖಾ' ಸ್ಥಿತಿಯೆಂದು ತಿಳಿದು ತಮ್ಮ ಸಾಧನೆಯನ್ನು ಮಾಡುವರು.

ಮೌಲಾನ ಜಲಾಲುದ್ದೀನ್ ರೂಮಿ ಎಂಬ ಪ್ರಸಿದ್ಧ ಸೂಫಿ ಸಂತರು 'ಫನಾ-ಬಖಾ'ಗಳನ್ನು ಇಸ್ಲಾಂ ಧರ್ಮಕ್ಕನುಗುಣವಾಗಿ ಬಹಳ ಸುಂದರವಾಗಿ ವಿಶ್ಲೇಷಿಸಿದ್ದಾರೆ. ಇವರ ಫಾರ್ಸಿ ಭಾಷೆಯಲ್ಲಿನ ಅಭಿವ್ಯಕ್ತಿಯನ್ನು ಉರ್ದುವಿನಲ್ಲಿ ಹೀಗೆನ್ನಬಹುದು.

''ಆಂಚ್ ಸಿ ಸೂರಜ್ ಕೆ ಆಗೆ ಹಸ್ತ್ ಭಿ ಹೈ-ನೀಸ್ತ್ ಭಿ ಹೈ ಹೈಭಿ-ನಹಿಭಿ'' ಅಂದರೆ, ಸೂರ್ಯನ ಎದುರಿನಲ್ಲಿ ಬೆಂಕಿಯ ಉರಿಯಂತೆ ಬೆಂಕಿಯು ಸೂರ್ಯನ ಪ್ರಕಾಶದಲ್ಲಿ ಇದ್ದೂ ಇಲ್ಲದಂತಾಗುತ್ತದೆ. ತನ್ನ ಪ್ರಕಾಶವನ್ನು ನಾಶಪಡಿಸಿಕೊಂಡರೂ ಅದನ್ನು ಸ್ಪರ್ಶಿಸಿದಾಗ ತನ್ನ ಸುಡುವ ಗುಣವನ್ನು ಮಾತ್ರ ಕಳೆದುಕೊಳ್ಳದೆ ತನ್ನತನವನ್ನು ಉಳಿಸಿಕೊಂಡಿರುವಂತೆ ಫನಾ ಮತ್ತು ಬಖಾ ತತ್ವಗಳು ಎಂದು ಅಬ್ದುಲ್ ಹಮೀದ್ ಅವರು ತಮ್ಮ ಕೃತಿಯಲ್ಲಿ ಬಹಳ ಸೊಗಸಾಗಿ ವಿಶ್ಲೇಷಿಸಿದ್ದಾರೆ (ಹಮಿದ್ ೧೯೬೪: ೩೭-೩೮).[೨]

## ೨.೩ ಬಂದೇನವಾಜ್ ದರ್ಗಾದ ಉರು(ಜಾತ್ರ)ಸು ವಿಧಿ-ವಿಧಾನಗಳು

ದಕ್ಷಿಣ ಭಾರತದಲ್ಲಿಯೇ ನಡೆಯುವ ಬಹುದೊಡ್ಡ ಉರುಸು ಎಂದರೆ ಖಾಜಾ ಬಂದೇನವಾಜ್‌ರದು ಎಂದು ಹೇಳಬಹುದು. ದಕ್ಷಿಣ ಭಾರತದ ಜನರಂತೂ ಸೇರುವುದಲ್ಲದೆ ಉತ್ತರ ಭಾರತದಿಂದಲೂ ಕೂಡ ಜನರು ಉರುಸಿಗೆ ಬರುತ್ತಾರೆ. ಮಜಾಹರಿನ ದರ್ಶನ ಪಡೆಯುತ್ತಾರೆ. ದರ್ಗಾದಲ್ಲಿ ಸುತ್ತಾಡಿ ಮನ ಪಾವನಗೊಳಿಸಿಕೊಳ್ಳುತ್ತಾರೆಂದು ವಿದ್ವಾಂಸರು ಅನುಯಾಯಿಗಳನ್ನು ಸಂದರ್ಶಿಸಿ ಉಲ್ಲೇಖಿಸಿದ್ದಾರೆ (ಕರದಳ್ಳಿ ೨೦೦೮: ೪೯).[೬೩] ಸಂತರು ಸತ್ತ ಸಮಾಧಿಯಾದ ಮೇಲೆ ದೈವಗಳಾಗಿ ಮರುಹುಟ್ಟು ಪಡೆದು, ಸಮುದಾಯಗಳಲ್ಲಿ ಹೇಗೆ ಬೆರತರು ಎಂಬುದನ್ನು ಅವರ ಸುತ್ತ ಸೃಷ್ಟಿಯಾಗಿರುವ ಆಚರಣೆ ಮತ್ತು ಮಿತ್‌ಗಳಲ್ಲಿ ನೋಡಬಹುದು. ದಿನನಿತ್ಯ ಮನೆಗಳಲ್ಲಿ ಈ ಆಚರಣೆಗಳು ನಡೆಯುತ್ತವೆ. ಸ್ಥಾವರರೂಪಿ ಸಮಾಧಿಗಳನ್ನು ಆರಾಧಿಸುವುದು ತಾತ್ವಿಕವಾಗಿ ಸಾಂಪ್ರದಾಯಿಕ ಇಸ್ಲಾಮಿಗೆ ವಿರುದ್ಧ ದರ್ಗಾಗಳ ಆರಾಧನೆಯು ಇರಾನ್, ಇರಾಕ್, ಅಫಘಾನಿಸ್ತಾನ ಬಿಟ್ಟರೆ ಈ ಉಪಖಂಡದ ದೇಶಗಳಾದ ಭಾರತ, ಪಾಕಿಸ್ತಾನ, ಬಾಂಗ್ಲಾದೇಶ, ಶ್ರೀಲಂಕಾಗಳಲ್ಲಿಯೇ ಆಚರಣೆಯಲ್ಲಿ ಇರುವುದು. ಆದರೆ ಪ್ರತಿಯೊಂದು ದರ್ಗಾಗಳ ಉರುಸ್‌ಗಳಲ್ಲಿ ಒಂದೊಂದು ವಿಭಿನ್ನವಾದ ಆಚರಣೆಗಳನ್ನು, ಸಂಪ್ರದಾಯಗಳನ್ನು ಅಳವಡಿಸಿಕೊಳ್ಳಲಾಗಿದೆ. ಅದು ಇರುವ ಪ್ರಾದೇಶಿಕ ಸ್ಥಳದ ಆಧಾರದ ಮೇಲೆ ಮತ್ತು ಅಲ್ಲಿನ ಜನರ ಧಾರ್ಮಿಕ ನಂಬಿಕೆಗಳ ಮೇಲೆ ಅವಲಂಬಿಸಿದೆ. ಉದಾಹರಣೆಗೆ, ಕಾಸರಗೋಡು ಕರಾವಳಿ ಭಾಗದ ಉರುಸುಗಳು ಬಿಜಾಪುರದಿಂದ ದೆಹಲಿಯವರೆಗೆ ಕಾಣಬರುವ ಉರುಸುಗಳಿಗಿಂತ ಭಿನ್ನವಾದವು.

ಸೂಫಿಗಳು ಪರ್ಶಿಯಾ ಮೂಲದವರಲ್ಲ, ಅರಬ್‌ಸ್ಥಾನದವರು. ಅವರು ಮೂಲತಃ ಧರ್ಮ ಪ್ರಸಾರಕರು. ಇಲ್ಲಿನ ಮುಸ್ಲಿಮರಾದ ಮಾಪಿಳ್ಳೆ ಬ್ಯಾರಿಗಳು ಕೂಡ ಫಾರಸಿ ಉರ್ದು ಪರಂಪರೆಗೆ ಸಂಬಂಧಿಸಿದವರಲ್ಲ. ಅರಬ್ ಮಲೆಯಾಳ ಸಂಸ್ಕೃತಿಯವರು. ಹೀಗಾಗಿ ಇಡೀ ಉರುಸು ಮಲೆಯಾಳ ಅರಬ್ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿದೆ. ಉರುಸುಗಳಲ್ಲಿ ನಡೆಯುವ ಕೆಲವು ಸಾಮಾನ್ಯ ಆಚರಣೆಗಳೆಂದರೆ ಸಕ್ಕರೆ ಮಾಲ್ದಿ, ಹೂವು ಗಂಧವಿಟ್ಟು, ಲೋಬಾನ, ಊದುಬತ್ತಿ ಹತ್ತಿಸಿ, ಫಾತೆಹಾ ಮಾಡಿಸುವುದು' ಉತ್ತತ್ತಿ ಕಟ್ಟುವುದು. ಗುಲಬರ್ಗಾ ಬಂದೇನವಾಜ್‌ರ ಉರುಸಿನಲ್ಲಿ ಅತಿ ಹೆಚ್ಚಿನ ಪ್ರಮಾಣದಲ್ಲಿ ಕೆಳ ವರ್ಗಗಳು ಅತ್ಯಂತ ದೃಢವಾದ, ಅಚಲವಾದ ವಿಶ್ವಾಸವಿಟ್ಟು ದರ್ಗಾದ ಉರುಸಿನಲ್ಲಿ ಭಾಗವಹಿಸುತ್ತಾರೆ. ದರ್ಗಾದ ಉರುಸಿನ ಕಾಲದಲ್ಲಿ ಜನರು ಅವರ ಇಷ್ಟಾರ್ಥಸಿದ್ಧಿ ಪಡೆದುಕೊಂಡಿದೆಯಾದರೆ, ಅಂದಿನ ದಿವಸ ಅವರು ಬೇಡಿಕೊಂಡ ಹರಕೆಯನ್ನು ಸಲ್ಲಿಸುತ್ತಾರೆ. ಸಜ್ಜಾದ(ಪೀಠಾಧಿಪತಿ) ದೆಹಲಿಯ ನಾಸಿರುದ್ದೀನ್‌ಚಿಸ್ತಿ ಹಾಗೂ ಅಜ್ಮೀರಿನ ಮೊಯಿನುದ್ದೀನ್ ಚಿಸ್ತಿ ದರ್ಗಾಗಳ ಖಲೀಫರ ಸಮ್ಮುಖದಲ್ಲಿ ದೊಡ್ಡ ಬಯಲಿನಲ್ಲಿ ಕುಳಿತು, ಸಮಾಗಾಯನ ಆಲಿಸುತ್ತಾರೆ ಮತ್ತು ನಜರ್ (ಕಾಣಿಕೆ) ಒಪ್ಪಿಸಿಕೊಳ್ಳುತ್ತಾರೆ. ಈ ನಜರನ್ನು ಗಾಯಕರಿಗೆ ಇನಾಮಾಗಿ ಕೊಡಲಾಗುತ್ತದೆ. ಉರುಸು ದರ್ಗಾದ ಸಂಸ್ಕೃತಿಯ ಪ್ರಧಾನಭಾಗ. ಕನ್ನಡದಲ್ಲಿ ಉರುಸಿನ ವರ್ಣನೆಯ ಹಾಡುಗಳು ವಿಪುಲವಾಗಿವೆ. ಬಂದೇನವಾಜ್‌ನ ಉರುಸು ಐದು ಶತಮಾನಗಳಿಂದ ದಖನ್ನಿನ ಒಂದು ಮಹಾಘಟನೆಯಂತೆ ಪ್ರಸಿದ್ಧವಾದುದು. ಎರಡನೇ ಇಬ್ರಾಹಿಂ ತನ್ನ 'ಕಿತಾಬೆ ನವರಸ್'ದ ಪದ್ಯವೊಂದರಲ್ಲಿ ಇದರ ವೈಭವವನ್ನು ಉಲ್ಲೇಖಿಸಿದ್ದಾನೆ.

"ಮಹಲೇ ಮಹಲ ಸದರ್ ಸಂವಾರೆ ಇಸ್ ನಮೂನೆ ಭಿಶತ್ ಉತಾರೆ" ಅಂದರೆ ಸ್ವರ್ಗವೇ ಧರೆಗಿಳಿದು ಬಂದಂತೆ ಅದರ ಚಂದವಿತ್ತಂತೆ. ೧೬ನೇ ಶತಮಾನದಲ್ಲಿದ್ದ ಸಿದ್ಧಲಿಂಗನು ತನ್ನ ಶಿವಲಿಂಗೇಶ್ವರ ಪುರಾಣದಲ್ಲಿ ಮಾಡುವ ವರ್ಣನೆ ಕೂಡ ಇಂತಹುದೇ.

ಎತ್ತನೋಡಲು ಶೃಂಗಾರ ಎತ್ತನೋಡಲು ಪಾತ್ರಮೇಳವು

ಎತ್ತನೋಡಲು ಗಂಧಕುಸುಮವು ಎತ್ತ ಕೇಳಲು ಕೌದಿಸವ್ವಾದ್ಯವು

ಎತ್ತನೋಡಲು ಕಂಚುಕಂಕಣ ಎತ್ತನೋಡಲು ಕಬ್ಬು ಫಲಗಳು

ಈ ವಿವರ ಕಂಡರೆ, ಜನ, ತಮ್ಮ ಉಡುವ ಉಣ್ಣುವ ದುಡಿಯುವ ಬದುಕುವ ರಿವಾಜುಗಳೆಲ್ಲ ತೊರೆದು, ಉರುಸಿನ ಆಚರಣೆಗಳನ್ನು ರೂಪಿಸುತ್ತಾರೆ ಅನಿಸುತ್ತದೆ (ತರೀಕೆರೆ ೨೦೦೮: ೧೫೭-೧೫೮, ೧೬೦).[೬೬] ಇವುಗಳಲ್ಲದೆ ಇನ್ನೂ ಅನೇಕ ವೈವಿಧ್ಯಮಯದಿಂದ ಕೂಡಿದ ಆಚರಣೆಗಳು ಆಯಾ ಪ್ರಾದೇಶಿಕ ಹಿನ್ನೆಲೆಯಲ್ಲಿ ವಿಭಿನ್ನವಾಗಿ ಕಂಡುಬರುವವು. ಅವುಗಳಲ್ಲಿ ಕೆಲವೊಂದನ್ನು ವಿಶ್ಲೇಷಣಾತ್ಮಕವಾಗಿ ನೋಡಲಾಗಿದೆ.

**೧. ದರ್ಗಾದ ಮರಗಳಿಗೆ ನೂಲು ಸುತ್ತುವ ಆಚರಣೆ**

ದರ್ಗಾದಲ್ಲಿ ನೆರೆದಂತಹ ಭಕ್ತರು ವಿವಿಧ ಬೇಡಿಕೆಗಳನ್ನಿಟ್ಟುಕೊಂಡು, ದರ್ಗಾದ ಆವರಣದಲ್ಲಿರುವ ಮರಗಳಿಗೆ ದಾರ ಸುತ್ತಿ ಸುತ್ತಿನ ಕೊನೆಗೆ ತಮ್ಮ ಕಷ್ಟಗಳು ಪರಿಹಾರವಾಗಲಿ ಎನ್ನುವ ರೀತಿಯಲ್ಲಿ ಮೂರು ಗಂಟುಗಳನ್ನು ಹಾಕುವ ಪದ್ಧತಿಯುಂಟು. ಇದು ದಕ್ಷಿಣ ಮತ್ತು ಉತ್ತರ ಕರ್ನಾಟಕದ ಬಹುತೇಕ ದರ್ಗಾಗಳಲ್ಲಿ ಕಂಡುಬರುತ್ತಿದ್ದರೂ, ಅದು ವಿಶೇಷವಾಗಿ ಬೆಂಗಳೂರಿನ ಹಜರತ್ ತಟಕ್ಕಲ್ ಮಸ್ತಾನ ದರ್ಗಾ, ಗುಲ್ಬರ್ಗಾದ ಹಜರತ್ ಖಾಜಾ ಬಂದೇನವಾಜ್ ದರ್ಗಾ, ಲಕ್ಷ್ಮೇಶ್ವರದ ಹಜರತ್ ದೂಧ ಪೀರಾಂ ದರ್ಗಾ, ಹುಲಗೂರಿನ ಹಜರತ್ ಸಯ್ಯದ್ ಹಜರೇಷಾ ದರ್ಗಾ, ಬಂಕಾಪುರದ ಹಜರತ್ ಸಯ್ಯದ ಅಲ್ಲಾಉದ್ದೀನ ಖಾದ್ರಿ ದರ್ಗಾಗಳಲ್ಲಿ ಕಂಡುಬರುತ್ತದೆ. ಭಕ್ತರು ತಂತಮ್ಮ ಬೇಡಿಕೆಗಳ ಈಡೇರಿದ ಮೇಲೆ ತಾವು ಹಾಕಿದ ಮುಡುಪನ್ನು ದರ್ಗಾಕ್ಕೊಪ್ಪಿಸಿ ಓದಿಕೆ ಮಾಡಿಸಿ, ದಾರಗಳನ್ನು ಬಿಚ್ಚಿಕೊಂಡು ಬರುವ ಚಿತ್ರಣವನ್ನು ಆಯಾ ದರ್ಗಾಗಳಲ್ಲಿ ಈವತ್ತಿಗೂ ನೋಡಬಹುದಾಗಿದೆ. ಉರುಳು ಸೇವೆಯ ಆಚರಣೆಗಳು, ಸಾಮಾನ್ಯವಾಗಿ ಉತ್ತರ ಕರ್ನಾಟಕದ ಅನೇಕ ದರ್ಗಾಗಳಲ್ಲಿ ದೀರ್ಘದಂಡ ನಮಸ್ಕಾರ ಹಾಗೂ ಉರುಳುಸೇವೆಯ ಆಚರಣೆಗಳು ಕಂಡುಬರುವವು. ಲಕ್ಷ್ಮೇಶ್ವರದ ಹಜರತ್ ದೂಧ ಪೀರಾಂ ದರ್ಗಾ, ಹುಲಗೂರಿನ ಹ. ಸಯ್ಯದ ಹಜರೇಷಾ ಖಾದರಿ ದರ್ಗಾ, ಬಂಕಾಪುರ ಹ.ಸಯ್ಯದ ಅಲ್ಲಾವುದ್ದೀನ್ ಖಾದರಿ ದರ್ಗಾ, ಡಂಬಳ ಗ್ರಾಮದ ಹಜರತ್ ಅಬ್ದುಲ್‌ಶಾಹವಲಿಗಳ ದರ್ಗಾಗಳಲ್ಲಿರುವಂತೆ ಗುಲಬರ್ಗಾ ಹಜರತ್ ಖಾಜಾ ಬಂದೇನವಾಜ್ ದರ್ಗಾಗಳಲ್ಲಿಯೂ ಉರುಳುಸೇವೆಯನ್ನು ಆಚರಣೆ ಮಾಡುತ್ತಾರೆ. ಇದರ ಆಚರಣೆಯ ಹಿನ್ನೆಲೆಯನ್ನು ಅರಿಯುವುದಾದರೆ, ತಂತಮ್ಮ ಇಷ್ಟಾರ್ಥ ಸಿದ್ಧಿಗಾಗಿ ಉದಾಹರಣೆಗೆ ನೌಕರಿ ಸಿಗಲಿ, ಮನೆಯಲ್ಲಿ ಯಾರಾದರೂ ಅನಾರೋಗ್ಯದಿಂದ ಬಳಲುತ್ತಿದ್ದರೆ, ಅವರು ಪೂರ್ಣ ಆರೋಗ್ಯವಂತರಾಗಲೆಂದು ಹೀಗೆ ನಾನಾ ಸಮಸ್ಯೆಗಳ ಹಿನ್ನೆಲೆಯಲ್ಲಿ ಬೇಡಿಕೊಂಡು ಹರಕೆ ಹೊತ್ತಿರುತ್ತಾರೆ. ಅದು ಈಡೇರಿದ ವರ್ಷಾ ದರ್ಗಾಕ್ಕೆ ಬಂದು ತಮ್ಮ ಹರಕೆಯನ್ನು ತೀರಿಸುವ ವಾಡಿಕೆಯಿದೆ.

### ೨. ದರ್ಗಾಗಳಲ್ಲಿ ದೀಪ ಹಚ್ಚುವ ಪದ್ಧತಿ

ವಿದ್ಯುತ್ ದೀಪಗಳು ಬರುವ ಪೂರ್ವದಲ್ಲಿ ಸಂತರ ಉರುಸುಗಳಲ್ಲಿ ಚಿರಾಘ್ (ದೀಪ) ಎಂದು ಆಚರಣೆಯಲ್ಲಿ ವಿಧಿವತ್ತಾಗಿ ಆಚರಿಸಲ್ಪಡುತ್ತಿತ್ತು. ಅಂದು ನೂರಾರು ಪ್ರಣತಿಗಳಲ್ಲಿ ಎಣ್ಣೆಹಾಕಿ, ದೀಪಹಚ್ಚಿ ದರ್ಗಾದ ಒಳಗೂ ಹೊರಗೂ ಮತ್ತು ಮೇಲಿಟ್ಟು, ಬೆಳಕಿನ(ಸುಜ್ಞಾನ)ನ ಉತ್ಸವವನ್ನಾಗಿ ಆಚರಿಸುತ್ತಾರೆ. ಇದು ಭಾರತೀಯ ಸಂಸ್ಕೃತೀಕರಣದ ಪ್ರತೀಕ. ಇಸ್ಲಾಂ ಧರ್ಮದ ಸಮಾಜ, ಕುರಾನ್ ಪಠಾಣ, ಅಲ್ಲಾಹನ ಜಿಕ್ಕರ್(ಧ್ಯಾನ), ಹಾಗೂ ದುಆ(ಆಶೀರ್ವಾದ) ಮೊದಲಾದ ಆಚರಣೆಗಳೊಂದಿಗೆ, ಹಿಂದೂ ಸಂಸ್ಕೃತಿಯ ಪ್ರಧಾನ ಆರಾಧನೆಯ ಸಾಮಗ್ರಿಗಳಾದ ದೀಪ, ಕಾಯಿ, ಕರ್ಪೂರ ಇತ್ಯಾದಿಗಳು ಸೇರಿಕೊಂಡು ಸಮಷ್ಟಿ ಸಂಸ್ಕೃತಿಯೆನಿಸಿದೆ(ಇಬ್ರಾಹಿಂ  ೨೦೦೮: ೧೯೬-೧೯೮).[೩೪] ಎಂಬ ವಿಚಾರಗಳನ್ನು ಇಲ್ಲಿ ಅರಿಯಬಹುದು.

### ೩. ಉರುಸು

ಅಲ್ಲಾಹನಲ್ಲಿ ಭಕ್ತಿ ಮತ್ತು ಧ್ಯಾನದ ಮೂಲಕ ಒಂದಾಗುವುದೇ ಸೂಫಿ ಪಂಥದ ಮುಖ್ಯ ಧ್ಯೇಯ. ಸೂಫಿ ಅನುಭಾವಿಗಳು ಭಾರತದ ತುಂಬೆಲ್ಲಾ ಸಂಚರಿಸಿ ಆಧ್ಯಾತ್ಮಿಕ ಮತ್ತು ಜ್ಞಾನಮಾರ್ಗವನ್ನು ಮಾನವ ಕುಲಕ್ಕೆ ಅರುಹಿ, ಅವರ ಒಳಿತನ್ನೇ ಬಯಸಿದ ಮಂತ್ರ ದ್ರಷ್ಟಾರರು ಮತ್ತು ಪವಾಡ ಪುರುಷರೆನಿಸಿರುವರು. ಅದರಲ್ಲಿ ದಕ್ಷಿಣ ಭಾರತದಲ್ಲಿ ಪ್ರಖ್ಯಾತಿ ಪಡೆದ ಸೂಫಿಸಂತರಲ್ಲಿ ಹಜರತ್ ಖಾಜಾ ಬಂದೇನವಾಜರು ಅಗ್ರಗಣ್ಯರು. ಹಜರತ್ ಖಾಜಾ ಬಂದೇನವಾಜರು ಜನರ ಕಲ್ಯಾಣ ಮತ್ತು ಸೇವೆ ಮಾಡುತ್ತಲೇ ಹಿಜರಿ ಸನ್ ೮೨೫ ಇಸ್ಲಾಮಿನ ತಿಂಗಳಾದ ಜಿಕದಾ ೧೬ನೇ ದಿನದಂದು (ಐಕ್ಯ) ವಫಾತ ಹೊಂದಿದರು. ಪ್ರತಿವರ್ಷ ಈ ದಿನದಂದು ಅವರ ಉರುಸು ವಿಜೃಂಭಣೆಯಿಂದ ನೆರವೇರುವುದು. ಗಂಧ, ಚಿರಾಘ್, ಝಿಯಾರತ್ ಎಂದು ಮೂರು ದಿನಗಳ ಕಾಲ ನಡೆಯುವ ಧಾರ್ಮಿಕ ವಿಧಿ-ವಿಧಾನಗಳು ಉರುಸಿಗೆ ಕಳೆ ತರುತ್ತವೆ. ಉರುಸಿಗಿಂತ ಒಂದು ತಿಂಗಳು ಮುಂಚೆ 'ಝೀಲಾ'ದ ಕಾರ್ಯಕ್ರಮ ನಡೆಯುತ್ತದೆ. ಝೀಲಾ ಎಂದರೆ ಗುಂಬಜ್‌ನ ಮೇಲೆ ಸುತ್ತಲೂ ಬೀಳುವಂತೆ ಹೂವಿನ ಸರಗಳನ್ನು ಸುತ್ತು ಹಾಕುತ್ತಾರೆ (ಕರದಳ್ಳಿ ೨೦೦೮: ೪೯).[೩೬]

### ೪. ರಸಮೆ ಝೀಲಾ ಸಂಧಲ್ ಕಾರ್ಯಕ್ರಮ



ಹಜರತ್ ಖಾಜಾ ಬಂದೇನವಾಜ್ ಗೇಸೂದರಾಜ್‌ರ ಉರುಸು ಒಟ್ಟು ನಾಲ್ಕು ದಿನ ವೈಭವದಿಂದ ಜರುಗಿ ಕೊನೆಗೊಳ್ಳುತ್ತದೆ. ಸಕಲ ಸಿದ್ಧತೆಗಳೊಂದಿಗೆ ಉರುಸು ಆಚರಣೆ ಆರಂಭಗೊಳ್ಳುವುದು. ಜಿಕದಾದ ಮೊದಲಿನ ತಿಂಗಳ ಶವ್ವಲ್‌ದಂದು ರಸಮೇ ಝೀಲಾ ಆಚರಣೆ ನಡೆಯುವುದು. ಈ ಕಾರ್ಯಕ್ರಮದ ವೈಶಿಷ್ಟ್ಯವೆಂದರೆ "೮೦ ಕೆ.ಜಿ. ಭಾರದ ಹೂವಿನ ಗುಚ್ಛವನ್ನು ತಯಾರಿಸಿ ಅದನ್ನು ದರ್ಗಾದ ಕಳಸಕ್ಕೆ ಏರಿಸುವುದಾಗಿದೆ". ಈ ದೃಶ್ಯವು ಕಣ್ಣಿಗೆ ಕಟ್ಟುವಂತಿರುತ್ತದೆ. ಗುಲಾಬಿ ಹೂವಿನ ಮಡಿ ನೀರು ಮತ್ತು ಸಂಧಲ್‌ದಿಂದ ಮಜಾರುಗಳನ್ನು ಸ್ವಚ್ಛಗೊಳಿಸುವರು. ಇದರಲ್ಲಿ ಸಾವಿರಾರು ಹಿಂದೂ ಮುಸ್ಲಿಮರು ಸೇರಿ ರಸಮೇ ಝೀಲಾ ಉತ್ಸವವನ್ನು ಒಂದು ತಿಂಗಳವರೆಗೆ ಆಚರಿಸುವ ಪರಂಪರೆಯುಂಟು (ಇಬ್ರಾಹಿಂ ೨೦೦೮: ೧೩೩).[೩೭]

ಹಿಂದು-ಇಸ್ಲಾಂ ಸಂಸ್ಕೃತೀಕರಣದ ಪ್ರತೀಕವಾದ ಅಂಶವನ್ನು ನಾವು ಗಮನಿಸಿದಾಗ ಕ್ಷೌರಿಕ ವೃತ್ತಿಯ ಶ್ರೀಮಂತ ತಂದೆ ಭೀಮಣ್ಣ ಮಶಾಲ ಮತ್ತು ಅವರ ವಂಶಸ್ಥರು ದೀವಟಿಗೆಯನ್ನು ಬಾಯಲ್ಲಿ ಹಿಡಿದು ಹಗ್ಗವನ್ನು ಕೈಯಲ್ಲಿ ಹಿಡಿದು ಗುಂಬಜ್ ಅನ್ನು ಏರುತ್ತಾರೆ. ಆ ಬೆಳಕಿನಲ್ಲಿಯೇ ಗುಂಬಜ್ ಅನ್ನು ಹತ್ತಬೇಕು. ನೋಡುವುದಕ್ಕೆ ರೋಮಾಂಚನ ವಾಗಿರುತ್ತದೆ. ಈ ದೀವಟಿಗೆಯ ಬೆಳಕಿನಲ್ಲಿಯೇ ಗುಂಬಜ್‌ಗೆ ಸುತ್ತು ಬೀಳುವಷ್ಟು ಹೂವಿನ ಸರಗಳನ್ನು ಮೈ ಮೇಲೆ ಹಾಕಿಕೊಂಡು ಹಗ್ಗವನ್ನು ಕೈಯಲ್ಲಿಡಿದು ಹೂಮಾರುವ ಹೂಗಾರ ವೃತ್ತಿಯ ಮಹ್ಮದ್ ಚುನ್ನುಮಿಯ್ಯಾ ತಂದೆ ಶರ್ಫೋದ್ದೀನ್ ಝೇಲಾವನ್ನು ಹೆಗಲ ಮೇಲಿಟ್ಟುಕೊಂಡು ಗುಂಬಜ್‌ನ್ನು ಹತ್ತುತ್ತಾನೆ. ಈ ದೀವಟಿಗೆಯನ್ನು ಬಾಯಲ್ಲಿಡಿದು ಝೇರಾವನ್ನು ಹೆಗಲ ಮೇಲಿಟ್ಟುಕೊಂಡು ಇಂದಿನವರೆಗೂ ಅನೂಚಾನವಾಗಿ ನಡೆಸಿಕೊಂಡು ಬಂದಿದ್ದಾರೆ(ಕರದಳ್ಳಿ, ೨೦೦೮: ೫೦).[೬೮]

೫. ಸಂಧಲ್(ಗಂಧ) ಉತ್ಸವ

ಜಿಕದಾದ ೧೫ನೇ ದಿನ ಸಂಧಲ್ ಉತ್ಸವವು ಮಹೆಬೂಬ ಗುಲ್‌ಷನ್ ಉದ್ಯಾನದಿಂದ ಸಕಲ ಸಿದ್ಧತೆಗಳೊಂದಿಗೆ ಹೊರಡುವುದು. ''ಮೊದ ಮೊದಲು ಸಂಧಲ್‌ದ ಪೆಟ್ಟಿಗೆಯು ಹೈದರಾಬಾದ್ ಬಾದ್‌ಶಹಾ ನಿಜಾಮುದ್ದೀನ್‌ನಿಂದಲೇ ಹೊತ್ತೊಯ್ಯಲ್ಪಡುತ್ತಿತ್ತು. ಪ್ರಸ್ತುತವಾಗಿ ಅವರ ಮಗಳ ಮಗ ಅಂದರೆ ಮೊಮ್ಮಗನಾದ ಬಹದ್ದೂರ ಮುಕರಮ್‌ಜಾರು ಹೊರುತ್ತಿರುವುದು'' ಕಂಡುಬರುತ್ತದೆ. ಹೀಗೆ ಸಂಧಲ್ ಪೆಟ್ಟಿಗೆಯನ್ನು ಬಾದಶಹ ವಂಶಸ್ಥರೇ ಹೊರುವ ರೂಢಿಯು ಮುಂದುವರೆದಿರುವುದು ಈ ಉತ್ಸವದ ವೈಶಿಷ್ಟ್ಯಗಳಲ್ಲೊಂದಾಗಿದೆ.

ಸಂಧಲ್ ಮೆರವಣಿಗೆಯ ಮುಂಚೂಣಿಯಲ್ಲಿ ಹಜ್ರತ್ ಖಾಜಾ ಪಾಷಾ ಮಹಮ್ಮದ್ ಹುಸೇನಿಯವರು ಹಾಗೂ ಅವರ ವಂಶಸ್ಥರು ಎರಡನೆಯ ಹಂತದಲ್ಲಿ ಸಂಧಲ್ ಪೆಟ್ಟಿಗೆಯನ್ನು ಹೊತ್ತಿರುವ ಬಾದಶಹ ನಿಜಾಮರ ವಂಶಸ್ಥರಿರುವರು. ಮೂರನೇ ಹಂತದಲ್ಲಿ ಒಂಟೆಗೆ ನೂರು ಸರಗಳನ್ನು ಹಾಕಿ, ಅದರ ಮೇಲೆ ಭಗವಾನ ಕುಳಿತಿರುವ ತರಹವಿರುತ್ತದೆ. ಇದರ ಹಿಂದುಗಡೆ ಎತ್ತಿನ ಗಾಡಿಯ ಮೇಲೆ ಮಲಕಿಮ್ ಮಂಟಪವಿದ್ದು, ಫಕೀರರಿಂದ ಹಲವು ಬಗೆಯ ಕರಾಮತ್‌ಗಳು ಪ್ರದರ್ಶನಗೊಳ್ಳುತ್ತಿರುತ್ತವೆ. ಅದರ ಹಿಂದೆ ಬಾಜಾ ಭಜಂತ್ರಿ ಮತ್ತು ವಿವಿಧ ರೀತಿಯ ಮಜಲುಗಳು ಮೊಳಗುತ್ತಿರುತ್ತವೆ.

ನಗರದ ಪ್ರಮುಖ ಬೀದಿಗಳಾದ ಪೊಲೀಸ್ ಚೌಕಿಯನ್ನು ಬಳಸಿಕೊಂಡು ಸಬಿರ್ ಬಜಾರದ ಮೂಲಕ ದರ್ಗಾಕ್ಕೆ ಬಂದು ತಲುಪಬೇಕಾದರೆ ಸಮಯ ರಾತ್ರಿ ೧೦ ಗಂಟೆಯಾಗುವುದು. ಹೀಗೆ ಸಾಗಿ ಬಂದ ಮೆರವಣಿಗೆಯು ಸಾಮೂಹಿಕ ಫಾತಿಹಾದೊಂದಿಗೆ ದರ್ಗಾದೊಳಗೆ ಪ್ರವೇಶಿಸುವುದು. ಅಂದು ರಾತ್ರಿ ಹಜರತ್ ಖಾಜಾ ಪಾರ್ಟಿ ಮತ್ತು ಮಹಮ್ಮದ್ ಜಾನಿ ಪಾರ್ಟಿಗಳಿಂದ ಕವ್ವಾಲಿ ಸಂಗೀತ ಕಾರ್ಯಕ್ರಮಗಳು ಜರುಗುತ್ತವೆ. ಸಂಧಲ್ ಉತ್ಸವದ ಮರುದಿನ ಅಂದರೆ ಶವ್ವಲ್ ತಿಂಗಳದ ೧೬ನೇ ದಿನ ಸಂಧಲ್ ಮತ್ತು ಮೂಲಿಯ ವಿಧಿವಿಧಾನಗಳು ನಡೆಯುತ್ತವೆ. ಸಂಧಲ್‌ದಿಂದ ಮಜಾರಗಳನ್ನು ಸ್ವಚ್ಛಗೊಳಿಸುವುದು. ಹೊಸ ಗಪೀಫ್‌ಗಳನ್ನು ಹೊದಿಸುವುದು ಅತ್ತರ್(ಸುವಾಸನೆಯ ಎಣ್ಣೆ)ವನ್ನು ಸಿಂಪಡಿಸುವುದು, ಗಂಧದ ಪುಷ್ಪದ ಮಾಲೆಗಳನ್ನು ಏರಿಸುವ ಮುಂತಾದ ಪ್ರಕ್ರಿಯೆಗಳೊಂದಿಗೆ ಫಾತಿಹಾ ನೆರವೇರುವುದು. ಆಮೇಲೆ ಭಕ್ತವೃಂದವು ಸಾಲಾಗಿ ದರ್ಗಾವನ್ನು ಪ್ರವೇಶಿಸಿ

ಸಂತರ ಮಜಾರ ದರ್ಶನ, ಸಕ್ಕರೆ ಲೋಬಾನದಿಂದ ಫಾತಿಹಾ ಮಾಡಿಸುವುದು, ದುಆ ಮಾಡಿಕೊಳ್ಳುವುದು ಮೊದಲಾದ ಕ್ರಿಯೆಗಳಲ್ಲಿ ತೊಡಗಿರುವುದು ಕಂಡುಬರುವುದು.

೬. ಚಿರಾಘ್

ಉರುಸಿನ ಮೂರನೆಯ ಅಂದರೆ ಶವ್ವಲ್ ತಿಂಗಳದ ೧೭ನೇ ದಿವಸ ಚಿರಾಘ್(ದೀಪ)ದ ಕಾರ್ಯಕ್ರಮವಿರುವುದು. ಸೂರ್ಯಾಸ್ತವಾದ ಕೂಡಲೇ ದೀಪ ಬೆಳಗಿಸುವ ಕ್ರಿಯೆ ಆರಂಭಗೊಳ್ಳುವುದು. ವಿದ್ಯುಚ್ಛಕ್ತಿಯ ದೀಪದ ಬಳಕೆಗಿಂತ ಮೊದಲು ಚಿರಾಘ್ ಕಾರ್ಯಕ್ರಮವು ಬಹು ವೈಶಿಷ್ಟ್ಯತೆಯಿಂದ ಕೂಡಿದ್ದಿತು. ಆದರೆ ಈಗ ಯಥೇಚ್ಛವಾಗಿ ಸರಲೈಟುಗಳನ್ನು ದರ್ಗಾದ ಮೇಲೆ, ಮಜಾರಗಳ ಮೇಲೆ ಇಡೀ ವರಾಂಡದ ಸುತ್ತಲೂ ಇಳೆ ಬಿಡುವುದರಿಂದ ಇಡೀ ವಾತಾವರಣವೇ ಜಗಮಗಿಸುತ್ತಿರುತ್ತದೆ. ದೀಪದ ಮಂದಬೆಳಕಿನಷ್ಟು ಸೊಗಸೆನಿಸುವುದಿಲ್ಲ. ಆದರೂ ಹಿಂದಿನ ಸಂಪ್ರದಾಯವನ್ನು ಇಂದಿಗೂ ಉಳಿಸಿಕೊಂಡು ಬರಲಾಗಿದ್ದು, ಭಕ್ತಾದಿಗಳು ತಮಗೆ ತಿಳಿದಷ್ಟು ಹಣ ಕೊಟ್ಟು, ಎಣ್ಣೆ ತಂದು ಪ್ರಣತಿಯಲ್ಲಿ ಹಾಕಿ ಕಾಂಪೌಂಡಿನ ಗೋಡೆಗಳ ಮೇಲೆ ದರ್ಗಾ ಪ್ರವೇಶಿಸುವ ಮೆಟ್ಟಿಲುಗಳ ಮೇಲೆ ದಾರಿಯ ಎರಡು ಬದಿಗಳಿಗೆ ಸಾಲಾಗಿಟ್ಟು ಚಿರಾಘನ್ನು ಬೆಳಗಿಸುವ ಕಾರ್ಯವು ನೋಡುವಂತಿರಬೇಕು. ಚಿರಾಘ್ ಕಾರ್ಯಕ್ರಮಗಳು ಮುಗಿದ ನಂತರ ಭಕ್ತರು ಪ್ರಸಾದ ಸ್ವೀಕಾರ ಮಾಡಿ, ಕವ್ವಾಲಿ ರಿವಾಯತ್ ಪದಗಳು, ವಾಜ್ ಬಯಾನ ಚರಿತ್ರೆಗಳನ್ನು ಶ್ರದ್ಧೆಯಿಂದ ಕೇಳುವ ಪರಂಪರೆಯುಂಟು (ಇಬ್ರಾಹಿಂ; ೨೦೦೮; ೧೩೩-೩೪).[೬೯] ಇದೇ ಪ್ರಕಾರವಾಗಿ ಕರ್ನಾಟಕ ರಾಜ್ಯದ ಅದರಲ್ಲೂ ವಿಶೇಷವಾಗಿ ಹೈದರಾಬಾದ್ ಕರ್ನಾಟಕದ ಪ್ರದೇಶಗಳಾದ ಬೀದರ್ ಜಿಲ್ಲೆಯ ಅಹ್ಮದ್ ಶಾಹ ವಲಿ ಉರುಸ್ ಕೊಪ್ಪಳ, ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿಯೂ ಇಂತಹ ಅದ್ಭುತ ಆಚರಣೆಗಳು ಜಾರಿಯಲ್ಲಿರುವುದು ವೈಶಿಷ್ಟ್ಯತೆಯಿಂದ ಕೂಡಿದೆ.

೭. ಜಿಯಾರಾತ್

ಉರುಸಿನ ನಾಲ್ಕನೆಯ ದಿವಸವು ಜಿಯಾರತ್ಎಂದು, ಅಂದರೆ ಮುಕ್ತಾಯದ ದಿವಸದ ಪ್ರಯುಕ್ತ ಸೂಫಿಯ ಆತ್ಮಶಾಂತಿಗಾಗಿ ಖುರಾನ್ ಪಠಣ ಮಾಡಿ ಫಾತೆ ಕೊಡಿಸುತ್ತಾರೆ. ನಂತರ ಪ್ರಸಾದ 'ತಬುರಕ್' ವಿತರಿಸುತ್ತಾರೆ. 'ಖಸೀದಾ ಬುರ್ದಾ ಶರೀಫ್' ಓದುತ್ತಾರೆ(ಹಜರತ್ ಮಹಮ್ಮದ್ ಪೈಗಂಬರರ ಕುರಿತು). ಹಿಂದೂ ಸಂಸ್ಕೃತೀಕರಣದ ಹಿನ್ನೆಲೆಯಲ್ಲಿ ಕರ್ಪೂರ ಹಚ್ಚುವುದು, ಕಾಯಿಗಳನ್ನು ಒಡೆಸುವುದು, ಕೊಬ್ಬರಿಯ ಚೂರು ಮತ್ತು ಸಕ್ಕರೆಯನ್ನು ಪ್ರಸಾದವೆಂದು ಹಂಚುವುದು. ಹಿಂದೂ-ಮುಸ್ಲಿಮರಿಬ್ಬರಲ್ಲಿಯೂ ಸಾಮಾನ್ಯವಾಗಿ ಕಂಡುಬರುವುದು ವೈಶಿಷ್ಟ್ಯಪೂರ್ಣವೆನಿಸಿದೆ. ಅಂದು ಸೂರ್ಯಾಸ್ತದೊಳಗೆ ದರ್ಗಾದ ವಂಶಸ್ಥರೂ, ಮುರೀದರೂ, ಭಕ್ತಾದಿಗಳೂ ಸೇರಿ ಜಿಯಾರತನ್ನು ಆಚರಿಸಿ ಫತೆಹಾ ಓದುವ ಮೂಲಕ ಉರುಸು ಕೊನೆಗೊಳ್ಳುವುದು(ಕರದಳ್ಳಿ ೨೦೦೮: ೫೧).[೭೦] ಸಾಂಸ್ಕೃತಿಕ ಚಟುವಟಿಕೆಗಳು ಹಜರತ್ ಖಾಜಾ ಬಂದೇನವಾಜ ಗೇಸೂದರಾಜ್‌ರ ದರ್ಗಾಗಳಲ್ಲಿ ಪ್ರತಿ ದಿನವೂ ಬೆಳಗ್ಗೆ ಸಾಯಂಕಾಲ ಕವ್ವಾಲಿಯ ಸಂಗೀತಗೋಷ್ಠಿಗಳು ನಡೆಯುತ್ತಿದ್ದರೂ ಉರುಸಿನ ದಿನಗಳಲ್ಲಿ ದೇಶದ ಬೇರೆ ಬೇರೆ ಭಾಗಗಳಿಂದ ಕವ್ವಾಲಿ ಪಾರ್ಟಿಗಳು ಬಂದು ವೈವಿಧ್ಯಮಯವಾಗಿ ಮನರಂಜನೆಯನ್ನು

ನೀಡುತ್ತವೆ. ಸ್ಥಳೀಯ ಹಜರತ್ ಖಾಜಾ ಪಾರ್ಟಿ, ಹೈದರಾಬಾದ್‌ನ ಜಾನಿ ಪಾರ್ಟಿ, ಬಾಂಬೆಯ ಹುಸೇನಿ ಪಾರ್ಟಿಗಳು ಬಂದಿರುತ್ತವೆ. ಹಜರತ್ ಹಮ್ಮದ್ ಪೈಗಂಬರ(ಸ್ವ)ರ ಜೀವನ ಸಾಧನೆ ಹಜರತ್ ಹುಸೇನರ ಹೋರಾಟ, ಖಲೀಫರ ಜೀವನ ಚರಿತ್ರೆಗಳು ಮುಂತಾದವುಗಳ ಹಿನ್ನೆಲೆಯಲ್ಲಿ ಒಬ್ಬರ ನಂತರ ಒಬ್ಬರಂತೆ ಕವ್ವಾಲಿಗಳು ನಡೆಯುವವು.

ಆ. ವಾಜ್ ಬಯಾನ್ ಚರಿತ್ರೆ

ಈ ಗೋಷ್ಠಿಯು ಧರ್ಮದ ಘನವಿದ್ವಾಂಸರಿಂದ ಮೌಲ್ವಿಗಳಿಂದ ವಿಶೇಷವಾಗಿ ನಡೆಯುತ್ತವೆ. ''ಹ.ಮಹಮ್ಮದ್ ಪೈಗಂಬರ(ಸ್ವ)ರ ಜೀವನ ಚರಿತ್ರೆ, ಸೂಫಿ ಜೀವನ ಚರಿತ್ರೆ ಹ.ಖಾಜಾ ಬಂದೇನವಾಜ್ ಘೀಸೂದರಾಜ್‌ರ ಜೀವನ ಚರಿತ್ರೆ ಹೀಗೆ ಇನ್ನೂ ಮುಂತಾದ ಮಹಿಮಾಪುರುಷರ ಚರಿತ್ರೆಗಳೊಂದಿಗೆ ಇಸ್ಲಾಂ ಧರ್ಮದ ತತ್ವಗಳನ್ನು ಸಿದ್ಧಾಂತಗಳನ್ನು, ನಿಯಮಗಳನ್ನು ಮೇಳೈಸಿಕೊಂಡು ಹೇಳುವ ಪರಂಪರೆಯುಂಟು.'' ಈ ಗೋಷ್ಠಿಯು ನಾಲ್ಕು ದಿನಗಳವರೆಗೆ ಯಥಾ ಪ್ರಕಾರ ನಡೆಯುವುದು. ಅನ್ನ ಪ್ರಸಾದದ ವ್ಯವಸ್ಥೆಯೂ ಹಜರತ್ ಖಾಜಾ ಬಂದೇನವಾಜರ ದರ್ಗಾದಲ್ಲಿ ವರ್ಷವಿಡಿ ಪ್ರಸಾದದ ವ್ಯವಸ್ಥೆಯಿರುತ್ತದೆ. ಭಕ್ತವೃಂದದವರಿಂದ ದಿನಾಲು ಅನೇಕ ಕಂದೂರಿಗಳು ಆಗುತ್ತಿರುತ್ತವೆ. ಅವರ ಮುರೀದರನ್ನೂ, ಬಡವರನ್ನೂ, ಪರಸ್ಥಳದವರನ್ನೂ ಕರೆದು ಊಟ ಮಾಡಿಸಿ ಪುಣ್ಯ ಸಂಪಾದಿಸಿಕೊಳ್ಳುವ, ಸಂತರ ಆತ್ಮವನ್ನು ಸಂತೃಪ್ತಗೊಳಿಸುವ ಪರಿ ಭಕ್ತಿಪೂರಿತವಾಗಿರುವುದು. ಅಲ್ಲಿ ಮಾಂಸಾಹಾರ ಹಾಗೂ ಶಾಖಾಹಾರ ಎರಡರ ವ್ಯವಸ್ಥೆಯೂ ಇರುತ್ತದೆ(ಇಬ್ರಾಹಿಂ ೨೦೦೮: ೧೩೫-೧೩೬).[೪೧]

ಹತ್ತು ದಿನಗಳ ಕಾಲ ಕೈಗಾರಿಕ ಪ್ರದರ್ಶನಗಳು ನಡೆಯುತ್ತದೆ. ಅಖಿಲ ಭಾರತ ಮಟ್ಟದ ಈ ಪ್ರದರ್ಶನದಲ್ಲಿ ಕೋಲ್ಕತ್ತಾ, ಹೈದರಾಬಾದ್, ಮದ್ರಾಸ್, ಮುರಾದಾಬಾದ್, ಕರ್ನಾಟಕದ ಇತರ ಭಾಗಗಳಿಂದ ವ್ಯಾಪಾರಸ್ಥರು ಬರುತ್ತಾರೆ. ಪ್ರದರ್ಶನದಲ್ಲಿ ವೈವಿಧ್ಯತೆಯನ್ನು ತೋರಿಸಿದವರಿಗೆ ಬಹುಮಾನ ಕೊಡಲಾಗುತ್ತದೆ. ಬಳೆ ಅಂಗಡಿ ಪಾಪಯ್ಯನವರು ಹೈದರಾಬಾದಿನವರು. ಅವರೇ ಬಹಳಷ್ಟು ಸಲ ಪ್ರಥಮ ಬಹುಮಾನವನ್ನು ಪಡೆದಿದ್ದಾರೆ. ಬಹಳ ಪ್ರಸಿದ್ಧ ಸ್ನಾನದ ಪೌಡರ್‌ಗಳು, ಯೂಸುಫ್ ಮಸಾಲಾ, ಗೇಸೂದರಾಜ್ ಮಸಾಲಾಗಳು, ಖಾಜಾ ಬಂದೇನವಾಜರು ಉತ್ತರ ಭಾರತದಿಂದ ಬರುವಾಗ ಈ ಪೌಡರ್‌ದ ಫಾರ್ಮುಲಾ ತಂದಿದೆ ಎಂದು ನಂಬಿಕೆಯಿಂದ ಕೊಂಡೊಯ್ಯುತ್ತಾರೆ. ಮೀನಾ ಬಜಾರ ಹೆಣ್ಣು ಮಕ್ಕಳ ಖರೀದಿಗಾಗಿಯೇ ವಿಶೇಷವಾಗಿ ಹಾಕಿದ ಅಂಗಡಿಗಳ ಸಾಲು, ಅವರವರ ಅಭೀಪ್ಸೆ ಹಣಕ್ಕೆ ತಕ್ಕಂತೆ ಲಭ್ಯವಾಗುವ ಇಲ್ಲಿಯ ಸಾಮಾನುಗಳು ತುಂಬಿದ ಜೇಬನ್ನು ಖಾಲಿ ಮಾಡುತ್ತವೆ. ಮನೆಯನ್ನು ಸಿಂಗಾರಗೊಳಿಸುವ ಗಾಜಿನ ಸಾಮಾನುಗಳು, ಪ್ಲಾಸ್ಟಿಕ್ ಸಾಮಾನುಗಳು ಚರ್ಮದ ಸಾಮಾನುಗಳು, ಆಭರಣಗಳು, ಬಳೆಗಳು, ಚಪ್ಪಲಿಗಳು ಒಂದೇ ಎರಡೇ ಮನಸೂರೆಗೊಳ್ಳುವ ಎಲ್ಲಾ ಸಾಮಾನುಗಳು ಈ ಮಿನಾಬಜಾರದಲ್ಲಿ ಲಭ್ಯ. ಸಾಲು ಸಾಲು ಅಂಗಡಿಗಳು, ತರತರದ ಸಾಮಾನುಗಳು ವಿವಿಧ ಆಕರ್ಷಣೆಗಳು ಏನು ಕೊಳ್ಳಲಿ ಏನು ಬಿಡಲಿ ಎನ್ನುವಷ್ಟು ತಲೆಕೆಡಿಸಿ ಬಿಡುತ್ತವೆ. ಈ ರೀತಿಯಾಗಿ ವೈವಿಧ್ಯತೆಯಿಂದ ಜರಗುವ ಉರುಸ್ ಜನರ ಮನದಲ್ಲಿ ತನ್ನ ನೆನಪನ್ನು ಅಳಿಸದಂತೆ ಬಿಟ್ಟು ಹೋಗುತ್ತದೆ.

## ೨.೪. ಬಂದೇನವಾಜ್ ಟ್ರಸ್ಟ್‌ಸ್ಥಾಪನೆ ಮತ್ತು ಶೈಕ್ಷಣಿಕ ಕೇಂದ್ರಗಳು

ಹಜರತ್ ಸಯ್ಯದ್ ಮೊಹಮ್ಮದ್ ಮಹಮ್ಮದ್ ಹುಸೇನಿಯವರು ಬಂದೇನವಾಜರ ಪರಂಪರೆಯ ಸಂತಾನರಲ್ಲಿ ಇವರು ೪೩ನೆಯವರು. ೧೯೨೩ ಡಿಸೆಂಬರ್ ೨೯ರಂದು ಜನಿಸಿದ ಇವರು ಸಾಮಾಜಿಕ ಶೈಕ್ಷಣಿಕ ಕಾರ್ಯಾಗಾರದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡವರು. ಬಂದೇನವಾಜರ ನಡೆ ನುಡಿಗಳನ್ನು ಇವರಲ್ಲಿ ನಾವು ಕಾಣಬಹುದೆಂದು ಅವರ ಸಮೀಪವರ್ತಿಗಳು ತಿಳಿಸುತ್ತಾರೆ. ಸಮಾಜದ ಏಳ್ಗೆ, ದರ್ಗಾದ ವಿಧಿ ವಿಧಾನಗಳು ಇವುಗಳ ಕುರಿತು ಚಿಂತಿಸುತ್ತಾ ಕೂಡಲಿಲ್ಲ. ಸಮಾಜ ಬಾಂಧವರಿಗೆ, ಒಳ್ಳೆಯ ಶಿಕ್ಷಣ ಕೊಡುವ ಆ ಸಂಸ್ಥೆಗೆ ಸುಮಾರು ೪೦೦ ಎಕರೆ ಭೂಮಿ ಹಾಗೂ ೨೫೦೦೦ ರೂಪಾಯಿಗಳನ್ನು ನಗದು ಕೊಟ್ಟರೆಂದು ಹೇಳುತ್ತಾರೆ.

ಇಸ್ಲಾಂ ಸಂಸ್ಕೃತಿಯಲ್ಲಿ ಮಹಿಳಾ ಶಿಕ್ಷಣ ಸ್ವಲ್ಪ ತೊಂದರೆದಾಯಕ. ಅಲ್ಲಿ ಸಹಶಿಕ್ಷಣ(ಕೋ-ಎಜುಕೋಷನ್)ಕ್ಕೆ ಹಿಂಜರಿತ. ಆ ಕಾರಣ ವಿಶೇಷವಾಗಿ ಮಹಿಳೆಯರಿಗೆ ಶಿಕ್ಷಣ ಕೊಡಿಸುವ ನಿರ್ಧಾರ ಮಾಡಿದರು. ಇದು ಆ ಸಮಾಜಕ್ಕೆ ಕೊಟ್ಟ ಬಹುದೊಡ್ಡ ಕಾಣಿಕೆ. ಗುಲಬರ್ಗಾದಲ್ಲಿ ನ್ಯಾಷನಲ್ ಕಾಲೇಜ್ ಸಂಸ್ಥೆಗೆ ಸ್ಥಳ ಕೊಟ್ಟಿದ್ದಾರೆ. ಫಾರಾನ್ ಶಿಕ್ಷಣ ಸಂಸ್ಥೆಗೂ ಸ್ಥಳಾವಕಾಶ ಕಲ್ಪಿಸಿಕೊಟ್ಟಿದ್ದಾರೆ. ಅಂತೆಯೇ ಅಂಜುಮಾನ್ ತರಕೀ ಉರ್ದು ಕಟ್ಟಡಕ್ಕಾಗಿ ಸ್ಥಳದಾನ ಮಾಡಿದ್ದಾರೆ. ಸಮಾಜ. ಶಿಕ್ಷಣ, ಸೇವೆಯನ್ನು ಕಂಡು ಕರ್ನಾಟಕ ಸರ್ಕಾರವು ರಾಜ್ಯೋತ್ಸವ ಪ್ರಶಸ್ತಿಯನ್ನು ಕೊಟ್ಟಿದೆ.

ಗುಲಬರ್ಗಾ ವಿಶ್ವವಿದ್ಯಾಲಯವು ಗೌರವ ಡಾಕ್ಟರೇಟ್ ಪದವಿಯನ್ನು ಕೊಟ್ಟು ಗೌರವಿಸಿದೆ. ಅಂತೆಯೇ ಕಲಬುರ್ಗಿ ಶ್ರೀ ಶರಣಬಸವೇಶ್ವರನ ಸಂಸ್ಥಾನದ ಎಂಟನೆಯ ಫೀಠಾಧಿಪತಿಗಳಾದ ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪ ಅವರಿಗೂ ಗುಲಬರ್ಗಾ ವಿಶ್ವವಿದ್ಯಾಲಯವು ಗೌರವ ಡಾಕ್ಟರೇಟ್ ಕೊಟ್ಟಿದೆ. ಈ ಸಂದರ್ಭದಲ್ಲಿ ಬಂದೇನವಾಜರ ಭಕ್ತರು ದಿನಾಂಕ ೨೨ ಜನವರಿ ೧೯೯೨ರಂದು ಬಹುದೊಡ್ಡ ಸನ್ಮಾನ ಸಮಾರಂಭವನ್ನು ಏರ್ಪಡಿಸಿದ್ದರು. ಲಲ್ಲಿರೋಸ್ ಶಾಲೆಯ ವತಿಯಿಂದ ದರ್ಗಾದವರೆಗೆ ವಿದ್ಯುದ್ದೀಪದ ವ್ಯವಸ್ಥೆ ಮಾಡಿದ್ದರು. ಹೃದಯಸ್ಪರ್ಶಿಯ ಈ ಸಮಾರಂಭದಲ್ಲಿ ಅಪ್ಪಾ ಅವರಿಗೆ ಹಾಕಿದ ಹೂಮಾಲೆಗಳು ಲೆಕ್ಕವಿಲ್ಲದಷ್ಟು. ಪ್ರಿತಿಯೇ ಮೈವೆತ್ತು ನಿಂತಂತೆ, ಭಾವೈಕ್ಯತೆಯೇ ಭಾವ ತುಂಬಿ ಬಂದಂತೆ ಈ ಸಮಾರಂಭ ಅದ್ದೂರಿಯಾಗಿ ನಡೆಯಿತು.

೧೯೭೪ರಲ್ಲಿ ಸಲಾಮತಿ ಎಂಬ ಉರ್ದು ಪತ್ರಿಕೆಯ ಸಂಪಾದಕರಾಗಿದ್ದ ಹಕೀಮ್ ಶಾಕೀರ್, ಹಮೀದ್ ಅಕ್ಮಾಲ್ ಕೂಡಿ ಶ್ರೀ ಶರಣಬಸವೇಶ್ವರರ ಜಾತ್ರೆಯ ಸಂದರ್ಭದಲ್ಲಿ ವಿಶೇಷ ಪುರವಣಿ ಒಂದನ್ನು ತೆಗೆದದ್ದು ವಿಶೇಷವೆಂದೇ ಹೇಳಬಹುದು. ದಾಸೋಹ ಬಗ್ಗೆ ಜಾತ್ರೆಯ ಬಗ್ಗೆ, ವಿಧಿವಿಧಾನಗಳ ಬಗ್ಗೆ ಭಾವೈಕ್ಯತೆಯ ಬಗ್ಗೆ ಹಲವು ಆಯಾಮಗಳನ್ನು ಕುರಿತು ಉರ್ದು ಪತ್ರಿಕೆಯೊಂದು ಜಾತ್ರೆ ಕುರಿತು ಪುರವಣಿ ತೆಗೆದದ್ದು ಈ ಭಾಗದ ಭಾವೈಕ್ಯತೆಗೆ ಜಲ್ವಂತ ಸಾಕ್ಷಿಯಾಗಿದೆ.

ಅಂತೆಯೇ ಹಜರತ್ ಸಯ್ಯದ್ ಶಾ ಮಹಮ್ಮದ್ ಮಹಮ್ಮದುಲ್ ಹುಸೇನಿಯವರು ಕರ್ನಾಟಕ ವಿಧಾನ ಪರಿಷತ್ತಿಗೆ ೧೯೮೯ರಲ್ಲಿ ನಾಮಕರಣ ಹೊಂದಿದ ಸಂದರ್ಭದಲ್ಲಿ ಶ್ರಿ ಶರಣಬಸವೇಶ್ವರರ ದೇವಾಲಯದ ಆವರಣದಲ್ಲಿ ಪೂಜ್ಯ ಅಪ್ಪ ಅವರು, ಅವರ ಭಕ್ತರು ಬಹುದೊಡ್ಡ ಗೌರವ ಕಾರ್ಯಕ್ರಮವನ್ನು ಏರ್ಪಡಿಸಿದರು.

**ಶೈಕ್ಷಣಿಕ ಸಂಸ್ಥೆಗಳು**

೧೯೫೮ರಲ್ಲಿ ಖಾಜಾ ಶಿಕ್ಷಣ ಸಂಸ್ಥೆಯನ್ನು ಹುಟ್ಟು ಹಾಕಿದ ಹಜರತ್ ಸಯ್ಯದ್ ಶಾ ಮಹಮ್ಮದ್ ಹುಸೇನಿಯವರು ದೂರದೃಷ್ಟಿಯ ಒಬ್ಬ ಚಿಂತನಶೀಲ. ಅಂದು ಹುಟ್ಟು ಹಾಕಿದ ಈ ಸಂಸ್ಥೆ ಹೆಮ್ಮರವಾಗಿ ಬೆಳೆದು ೪೦ ವರ್ಷದ ಪ್ರಬುದ್ಧಾವಸ್ಥೆಗೆ ಬೆಳೆದ ನಿಂತಿದೆ. ಈ ಭಾಗದ ಶೈಕ್ಷಣಿಕ ಚಾಲನೆಗೆ ತನ್ನ ಕಾಣಿಕೆಯನ್ನು ಸಲ್ಲಿಸಿದೆ.

೧. ದಾರೂಲ್ ಉಲೂಮ್ ದೀನಿಯಾ (ಪುರಾತನವಾದುದು)

೨. ಬೀಬಿರಜಾ (ಮಹಿಳಾ) ಪ್ರೌಢಶಾಲೆ ೧೯೫೮

೩. ಬೀಬಿರಜಾ (ಮಹಿಳಾ) ಮಹಾವಿದ್ಯಾಲಯ ೧೯೭೫

೪. ಖಾಜಾ (ಗಂಡು ಮಕ್ಕಳ) ಪ್ರೌಢಶಾಲೆ ೧೯೫೮

೫. ಬೀಬಿ ರಜಾ (ಮಹಿಳಾ) ಪ್ರಥಮ ದರ್ಜೆ ಕಾಲೇಜು, ೧೯೭೭

೬. ನಸೇಮನ್ ಶಿಶುವಿಹಾರ ಹಾಗೂ ಪ್ರಾಥಮಿಕ ಶಾಲೆ ೧೯೭೬

೭. ಬೀಬಿರಜಾ ತಾಂತ್ರಿಕ ಶಿಕ್ಷಣ ಮಹಿಳಾ ೧೯೭೮

೮. ಕೆ.ಬಿ.ಎನ್. ಇಂಜನಿಯರಿಂಗ್ ಕಾಲೇಜು ವಸತಿ ವಿದ್ಯಾರ್ಥಿನಿಲಯ ೧೯೮೦

೯. ಕೆ.ಬಿ.ಎನ್. ಇಂಜನಿಯರಿಂಗ್ ವಸತಿ ವಿದ್ಯಾರ್ಥಿನಿಲಯ ೧೯೮೫

೧೦. ಕೆ.ಬಿ.ಎನ್. ಸಾರ್ವಜನಿಕ ಆಸ್ಪತ್ರೆ ೧೯೮೮

೧೧. ಕೆ.ಬಿ.ಎನ್. ಶಿಶುವಿಹಾರ ೧೯೯೨

೧೨. ಸಯ್ಯದ್ ಅಕ್ಬರ್ ಹುಸೇನಿ ಇಂಗ್ಲಿಷ್ ಮಾಧ್ಯಮ ಶಾಲೆ ೧೯೮೯

೧೩. ಖಾಖಾ ಶಿಶುವಿಹಾರ ಮತ್ತು ಪ್ರಾಥಮಿಕ ಶಾಲೆ ೧೯೯೪

ಹೀಗೆ ಹಲವಾರು ಶಿಕ್ಷಣ ಕೇಂದ್ರಗಳನ್ನು ನಿರ್ಮಿಸಿ ಹೈದರಾಬಾದ್-ಕರ್ನಾಟಕ ಹಿಂದುಳಿದ ಪ್ರದೇಶದ ಭಾಗದ ಜನರಿಗೆ ದಾರಿದೀಪವಾಗಿದೆ(ಕರದಳ್ಳಿ, ೨೦೦೮: ೫೩-೫೬).[೨]

**೨.೬. ಉಪಸಂಹಾರ**

ಖಾಜಾ ಬಂದೇನವಾಜ್ ದಕ್ಷಿಣ ಭಾರತದ ಸೂಫಿಗಳಲ್ಲಿ ಅತ್ಯಂತ ಪ್ರಮುಖ ಸೂಫಿಸಂತರಾಗಿದ್ದರು. ಗುಲಬರ್ಗಾಕ್ಕೆ ಆಗಮಿಸಿದ ನಂತರ ಹಲವಾರು ಐತಿಹ್ಯಗಳಿಂದ ಕೂಡಿಕೊಂಡ ಇವರ ಜೀವನವು ಅತ್ಯಂತ ಸಾಮರಸ್ಯದಿಂದ ಕೂಡಿದ ಅಂಶಗಳನ್ನು ಈ ಅಧ್ಯಯನದ ಮುಖಾಂತರ ಅವಲೋಕಿಸಲಾಗಿದೆ. ಉರುಸ್‌ಗಳಲ್ಲಿ ಕೈಗೊಳ್ಳುವ ಇಸ್ಲಾಂ ಸಾಂಪ್ರದಾಯಿಕ ವಿಧಿ-ವಿಧಾನಗಳನ್ನು ಆಚರಿಸುವಾಗ ಹಿಂದೂ ಧರ್ಮದ ಕೆಲವು ಆಚರಣೆಗಳನ್ನು ಅಳವಡಿಸಿಕೊಂಡಿರುವುದು ಗಮನಿಸಬಹುದು.

## ಟಿಪ್ಪಣಿಗಳು

೧. ಉರುಸ್ ಎಂಬುದು ಹಿಂದೂ ಸಂತರಂತೆ ಸೂಫಿಗಳ ಮರಣಾನಂತರ ಮುಸ್ಲಿಂ ಬಾಂಧವರು ಇಸ್ಲಾಂ ಧರ್ಮದ "ಹದಿಸ್" ಗ್ರಂಥದಲ್ಲಿ ಉಲ್ಲೇಖಿಸಿದ ನಿಯಮಗಳನ್ನು ಪಾಲಿಸುವ ಮೂಲಕ ಆಚರಣೆಯಲ್ಲಿ ತೊಡಗುವರು.

೨. ಉರುಸ್ ಎಂಬ ಪದ್ಧತಿಯು ಯಾವ ಶತಮಾನದಿಂದ ಆಚರಿಸಲು ಆರಂಭಗೊಂಡಿದೆ ಎಂದು ಹೇಳುವಲ್ಲಿ ವಿದ್ವಾಂಸರಲ್ಲಿ ಒಮ್ಮತದ ಅಭಿಪ್ರಾಯವಿಲ್ಲ. ಆದರೂ ಕೆಲವು ಸೂಫಿ ಸಂತರ ದೈವಾಧೀನವಾದ ಬಳಿಕ ಆಚರಣೆಯಲ್ಲಿ ಬಂದಿದ್ದು ಅದು ಸುಮಾರು ೭೦೦ ಅಥವಾ ೮೦೦ ವರ್ಷಗಳಿಂದ ಎಂದು ಪ್ರಮುಖ ಸಂತರಾದ ಹಜರತ್ ಖಾಜಾ ಮೊಹಿದ್ದೀನ್ ಚಿಸ್ತಿಯ ಉರುಸ್ ಆಚರಣೆಯು ೮೦೦ ವರ್ಷಗಳಿಂದ ಹಿಂದಿನಿಂದಲೂ ಜಾರಿಯಲ್ಲಿದೆ.

೩. ಖಾಜಾ ಬಂದೇನವಾಜ್ ಹುಟ್ಟಿದ್ದು ಹಿಜರಿ ಸಂವತ್ಸರ ೭೨೧ ರಜಬ್ ತಿಂಗಳಲ್ಲಿ.

೪. ಖಾಜಾ ಬಂದೇನವಾಜ್ ಹುಟ್ಟಿದ್ದು ಹಜರತ್ ಇಮಾಮ್ ಜೈನುಲ್ ಆದೀನ್ ವಂಶಸ್ಥರ ಕುಟುಂಬದಿಂದ ಅಥವಾ ಮನೆತನದಿಂದ. ಅಬ್ದುಲ್ ಹಮೀದ್ ಕೃತಿಯಲ್ಲಿ ಖಾಜಾ ಬಂದೇನವಾಜ್ ಎಂಬುದು ವಿವರಿಸಿದ್ದಾರೆ.

೫. ಖಾಜಾ ಬಂದೇನವಾಜ್ ಅವರಿಗೆ ಗೇಸೂದರಾಜ್ ಎಂಬ ಬಿರುದು ಬರುವ ಸಂದರ್ಭದಲ್ಲಿನ ಒಂದು ಸ್ವಾರಸ್ಯಕರವಾದ ಘಟನೆಯ ಬಗ್ಗೆ ವಿವರಿಸಲು ಪ್ರಯತ್ನಿಸಲಾಗಿದೆ.

೬. ಒಬ್ಬ ವ್ಯಕ್ತಿಯ ವ್ಯಕ್ತಿತ್ವದ ಹಿಂದೆ ಅವನು ಬೆಳೆದುಬಂದ ಪರಿಸರದ ಪ್ರಭಾವ ಅತೀ ಮುಖ್ಯವಾಗಿರುತ್ತೆ. ಖಾಜಾ ಬಂದೇನವಾಜ್‌ರ ಮೇಲೆ ಅವರ ತಂದೆ ಸಯ್ಯದ್ ಯೂಸುಫ್ ಹುಸೇನಿ ಅವರ ವಿಚಾರಗಳು, ಪ್ರಾಮುಖ್ಯತೆ ಬಗ್ಗೆ ಜಯಶ್ರೀ ದಂಡೆಯವರು ತಮ್ಮ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

೭. ಅಬ್ದುಲ್ ಹಮೀದ್ ಅವರು 'ಖುಲ್ದಾಬಾದ್' ಎಂಬ ಪ್ರದೇಶದಲ್ಲಿ ದೆಹಲಿಯನ್ನು ಬಿಟ್ಟು ಬಂದಾಗ ನೆಲೆಸಿದ ನೆಲೆಯನ್ನು ಕುರಿತು ಮತ್ತು ಖುಲ್ದಾಬಾದ್ ಎಂಬ ದೌಲತಾಬಾದ್‌ದ ಪ್ರದೇಶಕ್ಕೆ ಬಂದು ವಾಸವಾಗಲು ಒದಗಿಬಂದ ಪ್ರಸಂಗಗಳ ಬಗ್ಗೆ ವಿವರಿಸಿದ್ದಾರೆ.

೮. ಖಾಜಾ ಬಂದೇನವಾಜ್ ಅವರ ಶೈಕ್ಷಣಿಕ ಜೀವನ ಕುರಿತು ಮತ್ತು ಅಂದಿನ ಕಾಲದ ಪ್ರಸಿದ್ಧ ಸೂಫಿ ಗುರುಗಳಾದ ಹಜರತ್ ಖಾಜಾ ನಸೀರುದ್ದೀನ್ ಚಿರಾಘರ ಶಿಷ್ಯತ್ವ ಪಡೆಯಲು ಒದಗಿಬಂದ ಸಂದರ್ಭ. ಅಬ್ದುಲ್ ಹಮೀದ್ (೧೯೯೪), ಚಂದ್ರಕಾಂತ ಕರದಳ್ಳಿ (೨೦೦೮) ಇವರು ಚರ್ಚಿಸಿದ್ದಾರೆ.

೯. ಖಾಜಾ ನಸೀರುದ್ದೀನ್ ಚಿರಾಘ್‌ರವರು ಬಂದೇನವಾಜ್‌ರನ್ನು ಶಿಷ್ಯನಾಗಿ ಒಪ್ಪಿಕೊಳ್ಳುವ ಮೊದಲು ಕೆಲವು ಪರೀಕ್ಷೆಗಳನ್ನು ಮಾಡಿದರು.

೧೦. ಮರಾಖಿಬ (ರಹಸ್ಯ ಜ್ಞಾನದ ಯೋಗ)ದ ಸಾಧನೆಯ ಮಾರ್ಗಗಳು.

೧೧. ಖಲಿಫಾ ಪದವಿ ಒದಗಿಬಂದು ಮತ್ತು ಆದರ ಪೀಠಾಧಿಪತಿಯಾದದ್ದು.

೧೨. ಬಂದೇನವಾಜ್ ಎಂದರೆ, ಶಿಷ್ಯಪ್ರಿಯ ಅಥವಾ ಭಕ್ತವತ್ಸಲ ಕಷ್ಟವೆಂದು ಅವರನ್ನು ಹಂಬಲಿಸಿ ಹೋದ ಮುರಿದ್ (ಶಿಷ್ಯ)ರಿಗೆ ಕಷ್ಟದಿಂದ ಪರಿಹಾರ ಮಾರ್ಗವನ್ನು ಬೋಧಿಸುವ ಮಹಾನ್ ಚೇತನ.

೧೩. ಖಾಜಾ ಬಂದೇನವಾಜ್ ಅವರ ವೈವಾಹಿಕ ಸಂಬಂಧದ ವಿವರಣೆ

೧೪. ಹಿಜರಾ ಶಕೆ ೮೦೧ರಲ್ಲಿ ತೈಮೂರನು ಭಾರತದ ಅಟಕ್ ನದಿಯನ್ನು ದಾಟಿ ದಂಡೆತ್ತಿ ಬರುವುದರಿಂದ ಪುನಃ ದೆಹಲಿಯನ್ನು ತ್ಯಜಿಸಿದ್ದು.

೧೫. ರಾಜಪುರೋಹಿತ ಜಯತೀರ್ಥರು ಬಂದೇನವಾಜ್ ಬಹಮನಿ ಸುಲ್ತಾನ್ ಫಿರೋಜ್‌ಶಾಹನ ಆಹ್ವಾನದ ಮೇರೆಗೆ ಗುಲಬರ್ಗಾಕ್ಕೆ ಬಂದು ಗುಲಬರ್ಗಾ ಕೋಟೆಯಲ್ಲಿ ನೆಲೆಸಿದರೆಂದು ವಿವರಿಸಿದ್ದಾರೆ ಮತ್ತು (ಖಾನ್ ಖಾಹ್) ಅಂದರೆ ಧರ್ಮಛತ್ರ ಎಂದು ವಿವರಿಸಿದ್ದಾರೆ.

೧೬. ಖಾಜಾ ಬಂದೇನವಾಜ್ ಅವರು ಹೊಂದಿದ ಮಕ್ಕಳ ಬಗ್ಗೆ ಚರ್ಚಿಸಲಾಗಿದೆ.

೧೭. ಖಾಜಾ ಬಂದೇನವಾಜ್‌ರು ವಿಸಾಲತ್ ಹೊಂದಿದು ಹಿಜಿರ ಶಕೆ ೮೨೫ ಜೀಕ್‌ದ್ ತಿಂಗಳ ೧೬ನೇ ತಾರೀಖು.

೧೮. ಖಾಜಾ ಬಂದೇನವಾಜ್ ಅವರು ಸಾಹಿತ್ಯಕ್ಕೆ ತಮ್ಮದೇಯಾದ ಕೊಡುಗೆಯನ್ನು ನೀಡಿದ್ದಾರೆ. ೧೦೫ ಕೃತಿಗಳನ್ನು ರಚಿಸಿರುವ ಇವರು ತಮ್ಮ ಕೈಯಿಂದ ಒಂದು ಕೂಡ ಬರೆದಿರುವುದಿಲ್ಲ. ಅದಕ್ಕಾಗಿ ಒಬ್ಬ ಬರಹಗಾರನನ್ನು ನೇಮಿಸಿದರು. ಇವರು ಕೃತಿಗಳನ್ನು ಫಾರಸೀ ಭಾಷೆಯಲ್ಲಿ ರಚಿಸುತ್ತಿದ್ದರು.

೧೯. ಗುಲಬರ್ಗಾ ಪ್ರದೇಶದಲ್ಲಿ ಉರ್ದು ಭಾಷೆಯನ್ನು ಅತಿಯಾಗಿ ಬಳಸಿಕೊಂಡ ಕೀರ್ತಿ ಖಾಜಾ ಬಂದೇನವಾಜ್ ಅವರಿಗೆ ಸಲ್ಲುತ್ತದೆ. ಉರ್ದು ಭಾಷೆಯಲ್ಲಿ ಗದ್ಯ ಕೃತಿ ರಚನೆ ಮಾಡಿದ ಪ್ರಥಮ ಬರಹಗಾರರು. 'ಮೇರಾಜುಲ್ ಆಫ್ ಖೀನ್' ಎಂಬುದು ಪ್ರಥಮ ಉರ್ದುಗದ್ಯಕೃತಿ.

೨೦. ಐತಿಹ್ಯಗಳು

೧. ಬಂದೇನವಾಜ್ ದರ್ಗಾದಲ್ಲಿ ಕಂಡುಬರುವ ಕಳ್ಳನ ಪಾದಗಳ ಹೆಜ್ಜೆ ಗುರುತು, ಬಸವರಾಜ ಪೊಲೀಸ್ ಪಾಟೀಲ್ ಅವರು ತಮ್ಮ ಜಾನಪದ ಚಿಂತನೆ ಕೃತಿಯಲ್ಲಿ ವಿವರಿಸಿದ್ದಾರೆ.

೨೧. ಖಾಜಾ ಬಂದೇನವಾಜ್ ಮತ್ತು ಶರಣಬಸವೇಶ್ವರ ಹೆಸರುಗಳಲ್ಲಿ ಇರುವ ದೀನ್ ಮರು ಪರಷು ಬಟ್ಟಲು ಬಗ್ಗೆ ಇರುವ ನಂಬಿಕೆಗಳು ಇವೆ.

೨೨. ಈಗ ಇರುವ ಖಾಜಾ ಬಂದೇನವಾಜ್ ಸಮಾಧಿ ಸ್ಥಳವಿರುವುದಕ್ಕೆ ಸಿಲಫೇನ್ ಎನ್ನುವರು ಅಂದು ಅಂದಿನ ಕಾಲಕ್ಕೆ ಶಿಲ್ಪಗ್ರಾಮ ಎಂದು ಕರೆಯಲ್ಪಡುತ್ತಿತ್ತು. ಕುಸನೂರ ಗ್ರಾಮದ ಸಿದ್ದಯ್ಯಪ್ಪ ಸ್ವಾಮಿ ಮತ್ತು ಬಂದೇನವಾಜ್‌ರ ನಡುವಿನ ಸಂಬಂಧ ಕುರಿತು ಚರ್ಚಿಸಲಾಗಿದೆ.

೨೩. ಗುಲಬರ್ಗಾ ತಾಲೂಕಿನಲ್ಲಿನ ಸಾವಳಗಿಯ ಶಿವಲಿಂಗ ಸ್ವಾಮಿ ಮತ್ತು ಬಂದೇನವಾಜ್‌ರ ಪವಾಡಗಳನ್ನು ಕುರಿತು ಮೌಖಿಕವಾದ ಆಧಾರಗಳು ಲಭ್ಯವಾಗಿವೆ. ಬಂದೇನವಾಜರು ಶಿವಲಿಂಗ ಸ್ವಾಮಿಗಳನ್ನು ಭೇಟಿಯಾಗಲು ಬರುವಾಗ 'ಹುಲಿ'ಯನ್ನು ಸವಾರಿಯನ್ನಾಗಿ ಮಾಡಿಕೊಂಡು ಬಂದುದು ಅದೇ ರೀತಿ ಶಿವಲಿಂಗಸ್ವಾಮಿಗಳು ಅವರು ಕುಳಿತುಕೊಂಡ ಕಟ್ಟೆಯನ್ನೇ ವಾಹನವನ್ನಾಗಿ ಮಾಡಿಕೊಂಡು ಭೇಟಿಯಾಗಿದ್ದು ಆಶ್ಚರ್ಯ ಸಂಗತಿ. ಅದಕ್ಕೆಂದು ಸಾವಳಗಿಯಲ್ಲಿ ಇವತ್ತಿಗೂ ಈ ಕಟ್ಟೆಯನ್ನು 'ಕಲ್ಯಾಣ ಕಟ್ಟೆ' ಎಂದು ಪೂಜಿಸುತ್ತಿದ್ದಾರೆ.

೨೪. ಆದರೆ, ಅದೇ ಮುಂದುವರೆದು ರಹಮತ್ ತರೀಕೆರೆ ಅವರ ಗ್ರಂಥದಲ್ಲಿ ಬಂದೇನವಾಜ್ ಜೀವಿತಾವಧಿಯ ಕಾಲಮಾನಕ್ಕೂ ಮತ್ತು ಸಾವಳಗಿಯ ಶಿವಲಿಂಗಸ್ವಾಮಿಯ ಕಾಲಮಾನಕ್ಕೆ ಅಂತರವಿದೆ. ಈ ಘಟನೆ ನಡೆದದ್ದು ೧೭ನೇ ಖಲೀಫನಾದ ಖಾಜಾ ವಲಿ ಹುಸೇನ್ ಬಂದೇನವಾಜ್ ಅವರು ಸಾವಳಗಿ ಶಿವಲಿಂಗಸ್ವಾಮಿ ಸಮಕಾಲೀನನು ಎಂದು ಉಲ್ಲೇಖಿಸಿದ್ದಾರೆ.

೨೫. ರಟಗಲ್ ರೇವಣಸಿದ್ಧೇಶ್ವರ ದೇವಾಲಯವು ಗುಲಬರ್ಗಾದಿಂದ ಸುಮಾರು ೩೫-೪೦ ಕಿ.ಮೀಗಳ ಅಂತರವಿದೆ. ಇಲ್ಲಿ ಮಾಣಿಕ ಪ್ರಭುವಿನ ದೇವಾಲಯದ ಕಿಟಕಿಯಿಂದ ಬಂದೇನವಾಜರ ದರ್ಗಾದ ಹಸಿರು ದೀಪ (ರಾತ್ರಿ ಹೊತ್ತಿನಲ್ಲಿ) ಕಾಣುತ್ತದೆ ಎಂದು ವದಂತಿ, ಆದರೆ ಇಡೀ ಗುಲಬರ್ಗಾ ಕಾಣುತ್ತದೆ. ಬಂದೇನವಾಜರ ಹಸಿರು ದೀಪ ಕಾಣುತ್ತಿಲ್ಲ. ಮುಂದುವರೆದು ಮಾಣಿಕ ಪ್ರಭುವಿನ ದೇವಾಲಯಕ್ಕೆ ಜಾಜಾ ಹಚ್ಚಂಗಿಲ ಅದು ಬಂದೇನವಾಜ್ ಮತ್ತು ಮಾಣಿಕ ಪ್ರಭುವಿನ ಗೆಳೆತನದ ಸಂಕೇತಕ್ಕಾಗಿ ಎಂದು ಜನರ ಪ್ರತೀತಿ.

೨೬. ಶೇಖ್ ಷಹಾಬುದ್ದೀನ್ ಸುಹರ್ವರ್ದಿ ಅಭಿಪ್ರಾಯದಲ್ಲಿ 'ಸೂಫಿಸಂ' ಎಂಬುದು ಹುಟ್ಟಿಕೊಂಡಿರುವ ಬಗ್ಗೆ ಮಾಹಿತಿಯನ್ನು ಕೊಟ್ಟಿದ್ದಾನೆ.

೨೭. ತಸವ್ವುಫ್‌ನ ಮೂಲ ಉದ್ದೇಶ ಸತ್ಯ ಶೋಧನೆ. ಇದು ಸಾಧ್ಯವಾಗುವದು ಕೇವಲ ನಾಲ್ಕು ಮಾರ್ಗಗಳಿಂದ ೧. ಷರಿಯತ್, ೨. ತರೀಖತ್, ೩. ಮಾರಿಫತ್ ಮತ್ತು ೪. ಹಕೀಕತ್ ಎಂಬ ಅಂಶಗಳ ಅಥವಾ ನಿಯಮಗಳ ಪಾಲನೆಯಿಂದ.

೨೮. ಖಾಜಾ ಬಂದೇನವಾಜ್‌ರು ದೀಕ್ಷೆ ಶಿಷ್ಯರುಗಳಿಗೆ ಉಪದೇಶ ನೀಡಿದ್ದನು. ಅದಕ್ಕೆ ಬೈಯತ್ ಎನ್ನುತ್ತಿದ್ದರು.

೩೨. 'ಫನಾ' ಮತ್ತು 'ಬಖಾ'ದ ಮಾಹಿತಿಯನ್ನು ಅಬ್ದುಲ್ ಹಮೀದ್ ಅವರ ಕೃತಿಯಲ್ಲಿ ವಿವರಣೆ ತೆಗೆದುಕೊಳ್ಳಲ್ಪಟ್ಟಿದೆ.

೩೩. ಖಾಜಾ ಬಂದೇನವಾಜ್ ಉರುಸ್‌ನ ವಿಧಿ-ವಿಧಾನಗಳು ದರ್ಗಾದಲ್ಲಿನ ಜನ ಆಚರಣೆ ಮಾಡುವ ಪದ್ಧತಿಗಳನ್ನು ವಿವರಿಸಲಾಗಿದೆ.

೩೪. ದರ್ಗಾದ ಉರುಸ್‌ನಲ್ಲಿ ಹಿಂದೂ ಸಂಸ್ಕೃತಿಯ ಪ್ರಧಾನ ಆರಾಧನೆಯ ಸಾಮಗ್ರಿಗಳಾದ ದೀಪ, ತೆಂಗಿನಕಾಯಿ, ಕರ್ಪೂರ ಇತ್ಯಾದಿಗಳು ಸೇರಿಕೊಂಡು ಸಮಷ್ಟಿ ಸಂಸ್ಕೃತಿಯೆನಿಸಿದ ಬಗ್ಗೆ ವಿಚಾರಗಳು ಇಬ್ರಾಹಿಂ ಎಂ. ಮುಲ್ಲಾ ಅವರು ಉತ್ತರ ಕರ್ನಾಟಕದ ಉರುಸ್‌ಗಳು ಎಂಬ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

೩೭. ರಸಮೆ ಜೀಲಾದ ವೈಶಿಷ್ಟ್ಯತೆಯ ವಿವರಣೆ ಇದರಲ್ಲಿ ಅತೀ ಪ್ರಮುಖವಾದ ವಿಚಾರಗಳ ಬಗ್ಗೆ ಚರ್ಚಿಸಲಾಗಿದೆ. ಇದರಲ್ಲಿ ಹಿಂದೂ-ಮುಸ್ಲಿಂ ಸೌಹಾರ್ದತೆಯ ಅಂಶಗಳು ಮಾದರಿ ಎನಿಸುತ್ತದೆ.

೩೯. ಸಂಧಲ್ (ಗಂಧ)ದ ಉತ್ಸವ ಇದು ಆರಂಭದಲ್ಲಿ ಹೈದರಾಬಾದ್ ಬಾದಶಹ ನಿಜಾಮುದ್ದೀನ್ ಅವರಿಂದ ತರಲ್ಪಡುತ್ತಿತ್ತು. ಈಗಲೂ ಮುಂದುವರೆದಿದೆ ಮತ್ತು ಚಿರಾಫ್ ಅಂದರೆ (ದೀಪ) ಬೆಳಗುವ ಕಾರ್ಯಕ್ರಮವಿರುತ್ತದೆ.

೪೦. ಜಿಯಾರತ್ ಎಂದರೆ ಉರುಸ್ ಆಚರಣೆಯ ಮುಕ್ತಾಯದ ದಿನ.

೪೨. ಖಾಜಾ ಬಂದೇನವಾಜ್ ಶೈಕ್ಷಣಿಕ ಸಂಸ್ಥೆಯ ಸ್ಥಾಪನೆ ೧೯೫೮ರಲ್ಲಿ. ಇದರ ಪ್ರತಿಫಲವಾಗಿ ಹೈದರಾಬಾದ್-ಕರ್ನಾಟಕದಲ್ಲಿ ಮುಸ್ಲಿಂ ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ಶಿಕ್ಷಣವನ್ನು ಪಡೆಯುವಂತೆ ಪ್ರೇರೇಪಿಸಿತು.

* * *

# ಅಧ್ಯಾಯ ಮೂರು

## ಶರಣಬಸವೇಶ್ವರ ಜಾತ್ರೆಯ ವ್ಯಾಪ್ತಿ ಮತ್ತು ಸ್ವರೂಪ

೩.೧. ಪೀಠಿಕೆ

೩.೨. ಶರಣಬಸವೇಶ್ವರ ಅವರ ಹಿನ್ನೆಲೆ

೩.೩. ಶರಣಬಸವೇಶ್ವರ ಜಾತ್ರೆಯಲ್ಲಿ ಆಚರಿಸುವ ವಿಧಿ-ವಿಧಾನಗಳು

೩.೪. ಶರಣಬಸವೇಶ್ವರ ಶೈಕ್ಷಣಿಕ ಕೇಂದ್ರಗಳು

೩.೫. ಉಪಸಂಹಾರ

೩.೧ ಪೀಠಿಕೆ

ಪಾಶ್ಚಿಮಾತ್ಯ ಸಂಸ್ಕೃತಿಯಿಂದ ಪ್ರಭಾವಿತಗೊಂಡು ಹೊಸ ಹೊಸ ಆವಿಷ್ಕಾರಗಳನ್ನು ದೇಶಕ್ಕೆ ಮತ್ತು ಇಡೀ ಪ್ರಪಂಚಕ್ಕೆ ನೀಡುವುದರ ಮೂಲಕ ವೈಜ್ಞಾನಿಕವಾಗಿ ಭಾರತವು ಅಭಿವೃದ್ಧಿ ಹೊಂದುತ್ತಿರುವುದು ಬಹಳ ಹೆಮ್ಮೆಯ ವಿಷಯ. ಇವುಗಳ ನೆಲೆಯಲ್ಲಿಯೇ ಭಾರತೀಯರ ಮೂಲಭೂತವಾದ ಧರ್ಮವು ಇಂದಿನ ದಿನಗಳಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಒಂದು ಹೊಸ ನೆಲೆಯನ್ನು ಕಂಡುಕೊಳ್ಳುವುದು ಅಗತ್ಯ. ಇಂತಹ ಒಂದು ಸಂದರ್ಭದಲ್ಲಿ ಭಾರತ ದೇಶದಲ್ಲಿಯೇ ಕರ್ನಾಟಕದ ಸಂಸ್ಕೃತಿಯು ಹಲವಾರು ಶತಮಾನಗಳಿಂದ ತನ್ನ ಹಿರಿಮೆಯನ್ನು ಮೆರೆಯುತ್ತಿರುವುದು ವಿಶೇಷವಾದುದು. ಅದರಲ್ಲೂ ಸ್ವಾತಂತ್ರ್ಯ ಭಾರತದ ಪೂರ್ವದಲ್ಲಿ ಹೈದರಾಬಾದ್ ನಿಜಾಮ ಆಳ್ವಿಕೆಗೆ ಒಳಪಟ್ಟ ಪ್ರದೇಶ.

ಹೈದರಾಬಾದ್ ಕರ್ನಾಟಕವು ಹಿಂದೂ ಧರ್ಮದ, ಸಮಾಜದ ಏಳ್ಗೆಗೆ ಅವಿರತವಾಗಿ ಹೋರಾಡುವ ಮುಖಾಂತರ ನಿಜಾಮನ ಕಪಿಮುಷ್ಟಿಯಿಂದ ಸ್ವತಂತ್ರಗೊಂಡು ಭಾರತ ದೇಶದಲ್ಲಿ ವಿಲೀನಗೊಂಡಿತ್ತು. ಈ ಹೈದರಾಬಾದ್ ಕರ್ನಾಟಕ ಪ್ರದೇಶವು ಧಾರ್ಮಿಕ ಕ್ಷೇತ್ರಕ್ಕೆ ವಿಶಿಷ್ಟ ಕೊಡುಗೆಯನ್ನು ಅರ್ಪಿಸುತ್ತಿದೆ. ಈ ನೆಲೆಗಟ್ಟಿನಲ್ಲಿ ಹಿಂದಿನ ೨ ಅಥವಾ ೩ ಶತಮಾನಗಳಿಂದ ಧಾರ್ಮಿಕ, ಸಾಮಾಜಿಕ ವಲಯ ಧಾರ್ಮಿಕ ದ್ವೇಷ ಭಾವನೆಗಳನ್ನು ತೊಲಗಿಸಲೆಂದು ಅನೇಕ ಮಹಾಪುರುಷರು, ಸಂತರು ಜನ್ಮ ತಾಳಿ ಅಹಿಂಸೆ ತತ್ವದ ಅಸ್ತ್ರವನ್ನು ಬಳಸಿಕೊಂಡು ಅವರ ಅಲೌಕಿಕ ಚಿಂತನೆಗಳು ಮಾನವ ಕುಲಕ್ಕೆ ಜಾಗೃತಗೊಳಿಸಿದ್ದು ಅತೀ ಮಹತ್ವದಿಂದ ಕೂಡಿವೆ.

ಶರಣಬಸವೇಶ್ವರರು ಮೂಲತಃ ಕೃಷಿ ಅಥವಾ ರೈತ ವರ್ಗದಲ್ಲಿ ಹುಟ್ಟಿದ ವೀರಶೈವರು. ಆದರೂ ಅಧ್ಯಾತ್ಮದ ವಿಚಾರಗಳು ಯಾವ ಜಾತಿ, ಧರ್ಮ, ಲಿಂಗಭೇದದ ತಾರತಮ್ಯವಿಲ್ಲದೆ ಎಲ್ಲ ವರ್ಗಗಳು ಹುಟ್ಟಿದ್ದು ದೈವತ್ವದ ಕೃಪೆಯಿಂದ ಎಂಬ ಜ್ಞಾನವನ್ನು ಜನಕ್ಕೆ ಸಾದರಪಡಿಸಿದರು. ಅದರ ಪರಿಣಾಮದಿಂದಲೇ ಎಲ್ಲ ವರ್ಗದ ಜನರೂ ಪ್ರತಿವರ್ಷ ಶರಣಬಸವೇಶ್ವರ ಎಂಬ ಮಹಿಮ ಪುರುಷನ ಪುಣ್ಯಸ್ಮರಣೆಯು ಜಾತ್ರೆಯ ರೂಪದಲ್ಲಿ ಆಚರಣೆಯನ್ನು ಮಾಡುವುದರಿಂದ ಮತ್ತು ಈ ಗುಲಬರ್ಗಾ ಪ್ರದೇಶದಲ್ಲಿ ಕೇವಲ ಹಿಂದೂ ಧರ್ಮೀಯರಲ್ಲದೆ ಮುಸ್ಲಿಂ, ಕ್ರೈಸ್ತಧರ್ಮದ ಅನುಯಾಯಿಗಳು ಸಹಬಾಳ್ವೆಯ ಜೀವನ ನಡೆಸುತ್ತಿರುವುದಲ್ಲದೆ ಧಾರ್ಮಿಕ ವಿಧಿ-ವಿಧಾನಗಳಲ್ಲಿ ಹಬ್ಬ ಹರಿದಿನ, ಜಾತ್ರೆ ಉರುಸುಗಳನ್ನು ಏರ್ಪಡಿಸಿ ಅದರಲ್ಲಿ ನೇರವಾಗಿ ಭಾಗವಹಿಸಿ ಅತ್ಯಂತ ಮನೋಹರವಾದ ಸಂಸ್ಕೃತಿಯ ಭಾವೈಕ್ಯತೆಯನ್ನು ಮೆರೆಯುತ್ತಾರೆ.

ವೀರಶೈವರಲ್ಲಿ ಇಂದಿಗೂ ದೈವೀಶಕ್ತಿಯಾಗಿ ಪೂಜೆಗೊಳ್ಳುತ್ತಿರುವವರಲ್ಲಿ ಸಿದ್ಧರಾಮೇಶ್ವರ, ಚೆನ್ನಬಸವಣ್ಣ, ಎಡೆಯೂರು ಸಿದ್ಧಲಿಂಗೇಶ್ವರ, ಮಲೆಯ ಮಾದೇಶ್ವರ ಮುಂತಾದವರ ಹೆಸರುಗಳನ್ನು ದಾಖಲಿಸಬಹುದು. ಶರಣಬಸವೇಶ್ವರರೂ ಈ ಸಾಲಿನಲ್ಲಿ ನಿಲ್ಲುತ್ತಾರೆ. ಇಂದು ಅವರ ಹೆಸರಿನಲ್ಲಿ ಸು. ೫೦೦ರಷ್ಟು

ಸಂಖ್ಯೆಯ ಅನುಭಾವ ಮಂಟಪ, ದಾಸೋಹ ಮಠ-ಮಂದಿರಗಳು ನಾಡಿನುದ್ದಗಲಕ್ಕಲ್ಲದೆ, ಆಂಧ್ರ, ಮಹಾರಾಷ್ಟ್ರ, ಗೋವಾಗಳಲ್ಲಿ ಬೆಳೆದು ನಿಂತಿವೆ. ಅಮೇರಿಕದಲ್ಲೂ ಶರಣಬಸವರ ದೇವಾಯವು ನಿರ್ಮಾಣಗೊಂಡಿರುವುದು ಅವರ ಗಾಢ ಪ್ರಭಾವಕ್ಕೆ ಕಾರಣವಾಗಿ ತೋರುತ್ತದೆ. ದೇವಾಲಯ ನಿರ್ಮಾಣವು ವೀರಶೈವ ಪರಂಪರೆಗೆ ಒಂದು ರೀತಿಯಲ್ಲಿ ವಿರೋಧವೆಂಬಂತೆ ಕಂಡರೂ, ಶರಣಬಸವೇಶ್ವರ ಹೆಸರಿನಲ್ಲಿ ಹುಟ್ಟಿದ ದೇವಾಲಯಗಳು ಕೇವಲ ದೇವಾಲಯಗಳಾಗಿ ಉಳಿಯದೆ ಅವು ಅನುಭವ ಮಂಟಪಗಳಾಗಿ, ದಾಸೋಹ ಮಹಾಮನೆ-ಮಠಗಳಾಗಿ, ಒಟ್ಟಾರೆ ಸಾಂಸ್ಕೃತಿಕ ನೆಲೆಗಳಾಗಿ ಬೆಳೆದಿವೆ.

ಪ್ರಸ್ತುತ ಅಧ್ಯಾಯದ ಮೊದಲನೆಯ ಭಾಗದಲ್ಲಿ ಶರಣಬಸವೇಶ್ವರರ ಹಿನ್ನೆಲೆಯಲ್ಲಿ ಅವರು ಜನ್ಮ ತಾಳಿದ ಗ್ರಾಮ ಅರಳಗುಂಡಿಯಲ್ಲಿನ ವಂಶವೃಕ್ಷ, ಮನೆತನದ ದೇವರುಗಳು ಅರಳಗುಂಡಿಯಿಂದ ಕಲಬುರ್ಗಿ ನಗರಕ್ಕೆ ಪ್ರಯಾಣ ಮತ್ತು ತದನಂತರ ಇತರ ಸಂತರುಗಳಾದ ಖಟ್ಟಾಂಗೇಶ್ವರ ಮಠದ ಶ್ರೀ ಸಿದ್ಧಲಿಂಗಸ್ವಾಮಿಗಳು, ಬಂದೇನವಾಜ್ ಸೂಫಿಯರೊಂದಿಗಿನ ಸಂಬಂಧ, ಅದಲ್ಲದೆ ಸುರಪುರದ ಅರಸ ನಾಲ್ಕನೆಯ ವೆಂಕಟನಾಯ್ಕ ಮತ್ತು ಕಲಬುರ್ಗಿಯ ಪ್ರಾಂತ್ಯದ ದೇಶಮುಖ ಮನೆತನದವರ ಜೊತೆಗೆ ಇವರು ಹೊಂದಿದ ಸ್ನೇಹಪರತೆಯನ್ನು ವಿವರಿಸಲಾಗಿದೆ.

ಪ್ರಸ್ತುತ ಅಧ್ಯಯನದ ಎರಡನೆಯ ಭಾಗದಲ್ಲಿ ಶರಣಬಸವೇಶ್ವರ ಜಾತ್ರೆ ಮಹೋತ್ಸವದಲ್ಲಿ ಕೈಗೊಳ್ಳುವ ಸಾಂಪ್ರದಾಯಿಕ ವಿಧಿ ವಿಧಾನಗಳು ಉಚ್ಚಾಯ, ನಂದಿಕೋಲು, ಪಲ್ಲಕ್ಕಿ ಉತ್ಸವ, ಪರಷು ಬಟ್ಟಲು ಮತ್ತು ನಂದಾದೀಪ ವಿಚಾರಗಳನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಮೂರನೆ ಅಧ್ಯಾಯದಲ್ಲಿ ಶರಣಬಸವೇಶ್ವರರ ಶೈಕ್ಷಣಿಕ ಕೇಂದ್ರಗಳ ಸ್ಥಾಪನೆ ಮತ್ತು ಅದರ ಕಾರ್ಯಾಭಿವೃದ್ಧಿಯನ್ನು ಚರ್ಚಿಸಲಾಗಿದೆ.

ಈ ಮೇಲಿನ ವಿಷಯಗಳು ಒಂದೊಂದಾಗಿ ವಿವರಣೆಯನ್ನು ನೀಡಲು ಪ್ರಯತ್ನಿಸಲಾಗಿದೆ.

**೩.೨. ಶರಣಬಸವೇಶ್ವರರ ಹಿನ್ನೆಲೆ**

ಕಲಬುರ್ಗಿಯ ದಕ್ಷಿಣಕ್ಕೆ ೩೨ ಮೈಲು ಅಂತರದಲ್ಲಿರುವ ಅರಳಗುಂಡಿಗೆ ಶರಣ ಬಸವೇಶ್ವರರ ಜನ್ಮಸ್ಥಳವಾಗಿದೆ (ಈಗ ಇದು ಜೇವರ್ಗಿ ತಾಲೂಕಿನಲ್ಲಿದೆ). ಅರಳು+ಗುಂಡಿಗೆ. 'ಗುಂಡಿಗೆ' ಎಂದರೆ ಚಿಕ್ಕ ಚಿಕ್ಕ ಹರಳುಗಳಿಂದ ಕೂಡಿದ ತಗ್ಗು ಪ್ರದೇಶ. ಹರಳುಗುಂಡಿಗೆ 'ಅರಳುಗುಂಡಿಗೆ'ಯಾಗಿರಬೇಕು. ಆದರೆ ಪುರಾಣಕವಿಗಳು ಇದನ್ನು 'ಅರಳ' ಎಂದರೆ ಪುಷ್ಪ, 'ಗುಂಡಿಗೆ' ಎಂದರೆ 'ಕರಡಿಗೆ', ಹೀಗೆ ಎರಡನ್ನೂ ಸಂಸ್ಕೃತೀಕರಿಸಿ 'ಪುಷ್ಪ ಕರಡಿಗೆ' ಎಂದಿದ್ದಾರೆ.

ಶರಣ ಬಸವೇಶ್ವರರು ಅರಳುಗುಂಡಿಗೆಯವರೆಂಬ ಕುರುಹಾಗಿ 'ಮಾಸಿನಮಗಿಯ' ಮೇಲಿನ ದೀಪವನ್ನು ಅಲ್ಲಿನವರು ಇಂದಿನವರೆಗೂ ರಕ್ಷಿಸಿಕೊಂಡು ಬಂದಿರುವುದು ವಿಶೇಷ ಸಂಗತಿ.

ಶರಣಬಸವೇಶ್ವರರ ಮನೆತನಕ್ಕೆ 'ಸಾಲೋಕ್ಯ' ಮನೆತನ ಎಂದು ಕರೆಯಲಾಗಿದೆ. ಪುರಾಣಗಳಲ್ಲಿ ಇದಕ್ಕೆ ವಿವರಣೆಯಿಲ್ಲ. ಆದರೆ ಹಲವಾರು ಜನ ಶಿವಶರಣರು ಜನಿಸಿದುದರಿಂದ ಇದಕ್ಕೆ ವಿವರಣೆಯಿಲ್ಲ. ಆದರೆ ಜನ ವದಂತಿಯ ಪ್ರಕಾರ ಈ ಮನೆತನದಲ್ಲಿ ಹಲವಾರು ಜನ ಶಿವಶರಣರು ಜನಿಸಿದುದರಿಂದ ಇದಕ್ಕೆ 'ಸಾಲೋಕ್ಯ' ಎಂದು ಕರೆಯಲಾಗಿದೆ. ಇದು ಮೋಕ್ಷದ ಒಂದು ಬಗೆ(ಸಾಲೋಕ್ಯ, ಸಾಮಿಪ, ಸಾರೋಪ್ಯ, ಸಾಯುಜ್ಯ). ಶರಣಬಸವೇಶ್ವರರ ಹಿಂದೆಯೂ ಈ ಮನೆತನದಲ್ಲಿ ಹಲವಾರು ಜನ ಅಧ್ಯಾತ್ಮದ ಕಡೆಗೆ ಒಲವು ಇದ್ದಂತಹ ವ್ಯಕ್ತಿಗಳಿದ್ದರೆಂಬುದು ಸಂಭವನೀಯ. ಶರಣಬಸವೇಶ್ವರರ ದೊಡ್ಡಪ್ಪ ಅಥವಾ ಸಾಕುತಂದೆ ಆದಪ್ಪನು ಮಹಾಸಾತ್ವಿಕ ಮತ್ತು ಶರಣಜೀವಿಯೂ ಆಗಿದ್ದನು. ಇದಕ್ಕೆ ಅವನ ಮನೆತನದ ಹಿಂದಿನ ಪರಂಪರೆ

ಕಾರಣವಾಗಿರಬೇಕು. ಸಾಲೋಕ್ಯ ಮನೆತನದವರು ಇಂದು ಅರಳಗುಂಡಿಗೆಯಲ್ಲಿ ಮಾತ್ರವಲ್ಲದೆ ಗೊರಗುಂಡಿಗೆ ಮುರಗಾನೂರು, ನಗನೂರು ಮುಂತಾದ ಕಡೆಗಳಲ್ಲಿಯೂ ವಾಸವಾಗಿದ್ದಾರೆ. ಚಾರಿತ್ರಿಕ ಸಂಗತಿಗಳ ಪ್ರಕಾರ ಶರಣಬಸವೇಶ್ವರರಿಗೆ ಜನ್ಮ ಕೊಟ್ಟ ತಾಯ್ತಂದೆಗಳು ಸಂಗಮ್ಮ-ಮುಕಪ್ಪ ದಂಪತಿಗಳು. ಸಂಗಮ್ಮನ ತವರೂರು ಗೊರಗುಂಡಿಗೆ. ಅಲ್ಲಿಯ ಗೀಜಾನವರ ಮನೆತನ ಸಂಗಮ್ಮನ ತವರುಮನೆ. ಇಂದು ಆ ಮನೆತನದವರೂ ಜೀವಿಸಿಲ್ಲ (ಹಿರೇಮಠ ೧೯೮೬; ೫೨-೫೩).[೨]

### ೧. ಶರಣಬಸವೇಶ್ವರ ಮನೆತನದ ವಂಶವೃಕ್ಷ

ನಗನೂರಿನಲ್ಲಿ ಸಾಲೋಕ್ಯ ಮನೆತನವಿದ್ದು, ಈ ಮನೆತನದ ಪೂರ್ವಜರು ಅರಳಗುಂಡಿಗೆಯಿಂದ ಇಲ್ಲಿಗೆ ಬಂದು ನೆಲೆಸಿದ್ದಾರೆ. ಶರಣಬಸವೇಶ್ವರರ ಅನುಗ್ರಹಜಾತನಾದ ಬಲವಂತ ಶರಣ ಇಲ್ಲಿಯೇ ಐಕ್ಯನಾದುದರಿಂದ ಈ ಶರಣ ಪರಂಪರೆ ಇಲ್ಲಿ ಮುಂದುವರೆದಿದೆ. ಶರಣಬಸವೇಶ್ವರರ ವಂಶಜರೇ ಮುಂದೆ ಇದರ ಮೇಲ್ವಿಚಾರಣೆಗೆ ನಿಂತುದರಿಂದ ನಗನೂರಿನ ಸಾಲೋಕ್ಯ ವಂಶಾವಳಿಯನ್ನು ಶರಣಬಸವೇಶ್ವರರ ಕಾಲ ನಿರ್ಧಾರಕ್ಕೆ ಒಂದು ಆಕರವಾಗಿ ಇಲ್ಲಿ ತೆಗೆದುಕೊಂಡಿದೆ.



ಮೇಲಿನ ವಂಶಾವಳಿಯ ದಾಖಲೆಯು ಶೋಧನೆಯಲ್ಲಿ ಹೊಸದಾಗಿ ಸೇರುತ್ತಿರುವ ಅಂಶವಾಗಿದೆ ಎಂದು ಎಸ್.ಎಂ. ಹಿರೇಮಠ ಅವರು ತಮ್ಮ ಶರಣಬಸವೇಶ್ವರರು ಹಾಗೂ ಅವರ ಪರಿಸರದ ಸಾಹಿತ್ಯ ಕೃತಿಯಲ್ಲಿ ವಿವರಿಸಿದ್ದಾರೆ.

೨.ಕಾಲ

ಶರಣಬಸವೇಶ್ವರ ಕಾಲದ ಬಗೆಗೆ ಯಾವ ಭಿನ್ನಾಭಿಪ್ರಾಯವೂ ಇಲ್ಲ. ಈವರೆಗೆ ಶರಣಬಸವೇಶ್ವರರನ್ನು ಕುರಿತು ಲೇಖನಗಳನ್ನು ಬರೆದಿರುವ ಸಿದ್ಧಯ್ಯ ಪುರಾಣಿಕರು[೫] ಚೆನ್ನಬಸವಯ್ಯ ನಂದೀಮಠ, ಶ್ರೀಜಯಚಾಮರಾಜೇಂದ್ರ ಒಡೆಯರು, ವಿ. ಶಿವಾನಂದರು, ಎಲ್. ಬಸವರಾಜು, ಸದಾನಂದ ಕನವಳ್ಳಿ, ಚೆನ್ನಪ್ಪ ಕರಿಮುನಿ, ಎಮ್.ಎಸ್. ಲಠ್ಠೆ ಮುಂತಾದವರು ಅವರ ಕಾಲವನ್ನು ಕ್ರಿ.ಶ.೧೭೪೬-೧೮೨೨ ಎಂದೇ ಉಲ್ಲೇಖಿಸಿರುವರು. ಆದರೆ ಪುರಾಣ ಕವಿಗಳು ಶರಣಬಸವರ ಕಾಲದ ಬಗೆಗೆ ಹೆಚ್ಚು ಗಮನ ಕೊಟ್ಟಿರುವುದಿಲ್ಲ. ಕೆಲವರು ಲಿಂಗೈಕ್ಯದ ಕಾಲವನ್ನು(೧೮೨೨) ಹೇಳಿರುವರು. ಶರಣಬಸವೇಶ್ವರರಿಗೆ ಸಂಬಂಧಿಸಿದಂತೆ ಉಪಲಬ್ಧವಿರುವ ಕೃತಿಗಳಲ್ಲಿ ನಮಗೆ ಮೊತ್ತ ಮೊದಲಿಗೆ ದೊರಕುವ ಕೃತಿ 'ಶರಣಬಸವೇಶ್ವರ ತಾರಾವಳಿ'. ಅದರ ಕರ್ತೃ ಹೊನ್ನಕಿರಣಗಿ ಮಠದ ಕರಿಬಸವಸ್ವಾಮಿ. ಇದರ ರಚನೆಯ ಕಾಲವನ್ನು ಶಕೆ ೧೭೫೫ ಎಂದು ಅದರ ಮೊದಲ ಪುಟದ ಮೇಲೆ ಉಲ್ಲೇಖಿಸಲಾಗಿದೆ. ಇದರ ಕಾಲವು ಕ್ರಿ.ಶ. ೧೮೩೩ ಆಗುತ್ತದೆ. ಇದರಲ್ಲಿ ಶರಣಬಸವೇಶ್ವರರು ಲಿಂಗೈಕ್ಯರಾದ ವರ್ಷದಲ್ಲಿಯೇ ಅವರ ಹೆಸರಿನಲ್ಲಿ ಹೂವಿನ ತೇರನ್ನು ಫರತಾಬಾದಲ್ಲಿ ಎಳೆಯಲಾಯಿತು, ಇದು ನಿರ್ವಿಘ್ನವಾಗಿ ೩ ವರ್ಷಗಳ ಕಾಲ ಸಾಗಿತೆಂದು ಹೇಳಲಾಗಿದೆ. ಆದರೆ ಶಕೆ ೧೭೫೩ರ ಚರನಾಮ ಸಂವತ್ಸರದಲ್ಲಿ ತೇರು ಮುರಿದು, ಅಪಶಕುನಗಳಾದವೆಂಬ ಸಂಗತಿ ಬಂದಿದೆ. ಮುಂದೆ ಇದನ್ನು ಸುರಪುರದ ದೇಸಾಯಿಗಳು ಮತ್ತು ಕಲಬುರ್ಗಿಯ ಅಮಲದಾರರು, ದೇಸಾಯಿ, ದೇಶಪಾಂಡೆಗಳು ಎಂಬ ಮನೆತನದವರು ಸರಿಪಡಿಸಿದರೆಂದು ಗೊತ್ತಾಗುತ್ತದೆ. ಇದನ್ನು ಪರಿಶೀಲಿಸಿದರೆ, ತೇರು ಮುರಿದ ಕಾಲವು ಕ್ರಿ.ಶ. ೧೮೩೧ ಎಂದು ಆಗುತ್ತದೆ. ಇದಕ್ಕೂ ಹಿಂದೆ ರಥೋತ್ಸವ ೯ ವರುಷಗಳ ಕಾಲ ನಡೆದು ಬಂದಿರುವುದರಿಂದ ಈ ೯ ವರ್ಷಗಳನ್ನು ಶರಣಬಸವೇಶ್ವರರ ಲಿಂಗೈಕ್ಯದ ಕಾಲವೆನ್ನಬಹುದು. ಶರಣರು ೭೬ ವರುಷ ಬದುಕಿದರೆಂದು ಹೇಳಲಾಗುತ್ತಿರುವುದರಿಂದ ೧೮೨೨ರಿಂದ ೨೬ ವರುಷ ಹಿಂದೆ ಹೋದರೆ ೧೭೪೬ ಅವರ ಜನನ ವರ್ಷ ಸಿಕ್ಕಿರುವುದು ಸ್ಪಷ್ಟತೆಯಿಂದ ಕೂಡಿದೆ (ಹಿರೇಮಠ ೨೦೧೦-೫೫)[೬].

೩. ಮನೆದೇವರು-ಗುರುಗಳು

ಶರಣಬಸವೇಶ್ವರರ ಮನೆತನದ ದೇವರು ಗುಡುಗುಂಟೆಯ ಅಮರೇಶ್ವರರು ಪುರಾಣಗಳಲ್ಲಿ ಕಲಕೇರಿಯ ಮರುಳಸಿದ್ಧರು. ಈ ಮನೆತನದ ಗುರುಗಳು ಎಂದು ಹೇಳಲಾಗಿದೆ. ಇಂದಿಗೂ ಶರಣಬಸವೇಶ್ವರ ಮನೆತನ ಮತ್ತು ಅವರ ದಾಸೋಹ ಪೀಠಕ್ಕೆ ಕಲಕೇರಿಯ ಮರುಳಾರಾಧ್ಯರ ಪೀಠದ ಸ್ವಾಮಿಗಳೇ ಗುರುಗಳಾಗಿರುವುದು ಚಾರಿತ್ರಿಕ ಸಂಗತಿ ಎಂಬುದಕ್ಕೆ ನಿದರ್ಶನ. ಕ್ರಿ.ಶ. ೧೭೨೮-೧೮೦೦ರ ಕಾಲದ ಗಡುವಿನಲ್ಲಿ ಐದನೆಯ ಪೀಠಾಧಿಪತಿಗಳಾದ ಮರುಳಾರಾಧ್ಯರೇ ಶರಣಬಸವೇಶ್ವರರ ಕಾಲದಲ್ಲಿ ಅವರ ಮನೆತನದ ಗುರುಗಳಾಗಿದ್ದರು.

೪. ವಿದ್ಯಾಭ್ಯಾಸ

ಶರಣಬಸವೇಶ್ವರರಿಗೆ ಚರಂತಿ ಸ್ವಾಮಿಗಳಿಂದ ವಿದ್ಯಾಭ್ಯಾಸ ದೊರಕಿತೆಂಬುದಾಗಿ ಕ್ಷೇತ್ರಮಾಹಿತಿಯಿಂದ ತಿಳಿದುಬರುತ್ತದೆ. ಪುರಾಣ ಕೃತಿಗಳಲ್ಲಿ ಶರಣಬಸವರ ವಿದ್ಯಾಗುರುಗಳ ಉಲ್ಲೇಖವಿಲ್ಲ. "ಓದಿಸುವ ಗುರುವರನ ಮಠಕ್ಕೆ ಮುದದಿಂದ ಕರೆದೊಯ್ದು..." ಎಂದಿಷ್ಟೆ ಅಲ್ಲಿ ಹೇಳಲಾಗಿದೆ (ಗುರುಲಿಂಗ ಸಿದ್ಧಕವಿ ಶ್ರೀ ಶ.ಬ: ೨-೪೭). ಇಲ್ಲಿ ಓದಿಸುವ ಗುರುವರನ ಮಠ ಎಂದರೆ ಚರಂತಿ ಸ್ವಾಮಿಗಳು ವಾಸವಾಗಿದ್ದ ಮಠವೇ ಆಗಿದ್ದು ಅದು ಹಿಂದೆ ಇದ್ದ ಸ್ಥಳವನ್ನು ಅರಳಗುಂಡಿಗೆಯಲ್ಲಿರುವ ಹಿರಿಯ ತಲೆಗಳು ತೋರಿಸಿದ್ದಾರೆ.

೫. ವಿವಾಹ

ಶರಣಬಸವೇಶ್ವರರ ಮೊದಲ ಪತ್ನಿಯು ಮಾಶಾಳ ಗ್ರಾಮದ ಬಾವಿ ಮನೆಯ ಶಾಂತಲಿಂಗಪ್ಪನವರ ಮಗಳು. ಇದನ್ನು ಕೆಲವು ಪುರಾಣಗಳು ಉಲ್ಲೇಖಿಸಿರುವುದಿಲ್ಲ. ಆದರೆ ಬಾವಿ ಮನೆತನದ ಸಂಬಂಧ ಐತಿಹಾಸಿಕ ಸತ್ಯವಾಗಿದೆ. ಇದಕ್ಕೆ ಸಂಬಂಧಿಸಿದಂತೆ ಹೆಚ್ಚಿನ ವಿವರಗಳು ದೊರೆಯುತ್ತವೆ. ಮಾಶಾಳ ಗ್ರಾಮವು ಇಂದಿನ ಅಫಜಲಪುರ ತಾಲೂಕಿನಲ್ಲಿದೆ. ಇಲ್ಲಿ ಇಂದಿಗೂ ಬಾವಿ ಮನೆತನದ ವಂಶಸ್ಥರು ಜೀವಿಸಿರುವರು. ಶಾಂತಲಿಂಗಪ್ಪನವರು ಅಂದು ವಾಸವಾಗಿದ್ದ ಮನೆ ಬಿದ್ದು ಹೋಗಿದೆ. ಮನೆಯಲ್ಲಿ ನಾಲ್ಕಾರು ಬಾವಿಗಳಿರುವುದರಿಂದಲೇ ಈ ಮನೆತನಕ್ಕೆ 'ಬಾವಿ ಮನೆ'ಯೆಂದು ಹೆಸರಾಗಿದೆಯೆಂಬುದು ಜನರ ಪ್ರತೀತಿ (ಹಿರೇಮಠ ೨೦೧೦: ೫೬-೫೮).[೨]

ಶರಣಬಸವರಿಗೆ ೧೨ನೆಯ ವಯಸ್ಸಿನ ಮಹಾದೇವಮ್ಮನವರನ್ನು ತಂದು ವಿವಾಹ ಮಾಡಲಾಯಿತೆಂದು ಶರಣಬಸವೇಶ್ವರ ತಾರಾವಳಿಯಲ್ಲಿ ಪ್ರಸ್ತಾಪಿಸಲಾಗಿದೆ. ಬಾಲ್ಯವಿವಾಹ ಪ್ರಚಲಿತವಿದ್ದ ಅಂದಿನ ಕಾಲದಲ್ಲಿ ಶರಣಬಸವೇಶ್ವರರಿಗೂ ಬಾಲ್ಯವಿವಾಹ ನಡೆದಿರುವ ಸಾಧ್ಯತೆಯಿದೆ. ಆದರೆ ಮಹಾದೇವಮ್ಮ ಬಹು ಬೇಗನೆ ಮಗುವನ್ನು ಹಡೆದ ಕೆಲವು ತಿಂಗಳಲ್ಲಿಯೇ ವಿಧಿವಶವಾದುದು ತಿಳಿದುಬರುತ್ತದೆ.

ಇನ್ನೊಂದು ಸಂಗತಿ ಎಂದರೆ ಶರಣಬಸವೇಶ್ವರರೂ ಎರಡನೆಯ ಮದುವೆಯಾದದ್ದು ತಮ್ಮ ದಾಸೋಹ ಆಚರಣೆಗೆ ಚ್ಯುತಿ ಬಾರದಂತೆ, ಬಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಆಲಮೇಲು(ಯಳಮೇಲಿ). ನಾಸಿಯವರ ಮನೆತನಕ್ಕೆ ಸಂಬಂಧಿಸಿದ ಚೆನ್ನಬಸಮ್ಮನವರನ್ನು ವಿವಾಹವಾದರು. ಅವರು ಕೂಡ ಕೇವಲ ಏಳು ವರ್ಷದ ದಾಂಪತ್ಯ ಜೀವನದ ತರುವಾಯ ಕ್ರಿ.ಶ. ಸು. ೧೭೪೯ರಲ್ಲಿ ಶಿವಸಾನ್ನಿಧ್ಯವನ್ನು ಸೇರಿದರು. ಅರಳಗುಂಡಿಗೆಯಲ್ಲಿ ಮೊದಲನೆಯ ಹೆಂಡತಿ ಮಹಾದೇವಮ್ಮ ಮತ್ತು ಚೆನ್ನಬಸಮ್ಮನವರ ಸಮಾಧಿ ಸೇರಿಸಿ ಅವುಗಳ ಮೇಲೆ ಅಲ್ಲಿಯ ಭಕ್ತರು ದೇವಾಲಯವೊಂದನ್ನು ನಿರ್ಮಿಸಿರುವರು. ಭಕ್ತರು ಇಂದು ಅದನ್ನು 'ಆಯಿಗುಡಿ'ಯೆಂದು ಕರೆಯುತ್ತಾರೆ(ಹಿರೇಮಠ ೨೦೧೦: ೫೯-೬೦)[೬].

ಶರಣಬಸವರ ಮನೆತನದ ಕಾಯಕ ಕೃಷಿಕರ್ಮವಾಗಿತ್ತು. ಶರಣಬಸವರು ತಮ್ಮ ಹೊಲವನ್ನು ಬಿತ್ತಿದ್ದರು. ಬೆಳೆದು ನಿಂತ ಹೊಲದಲ್ಲಿ ಮನುಷ್ಯರೊಂದಿಗೆ ಹಕ್ಕಿ-ಪಕ್ಷಿ ಪಶುಗಳಿಗೂ ಸಂತೃಪ್ತಗೊಳಿಸಿದರು. ಕುಡಿಯುವ ನೀರಿಗಾಗಿ ಹೊಲದ ನಾಲ್ಕೂ ಮೂಲೆಗಳಲ್ಲಿ ರಂಜಣಿಗೆಗಳನ್ನು ಹೂಳಿಸಿದರು. ಹೊಲದಲ್ಲಿ ಸರಳವಾಗಿ ದನಗಳು

ಪ್ರವೇಶಿಸಲು, ಪಾಲುಗಾರ ಹಚ್ಚಿದ್ದ ಬೇಲಿಗಳನ್ನು ಕಿತ್ತಿಸಿ ಹಾಕಿದರು. ಶರಣಬಸವರು ಅಂದು ಕೃಷಿ ಕಾಯಕ ಮಾಡಿದ ದಾಸೋಹದ ಹೊಲವು, ಇಂದಿಗೂ ಜನರ ಬಾಯಲ್ಲಿ 'ದಾಸೋಹದ ಹೊಲ'ವಾಗಿಯೇ ಉಳಿದಿದೆ. ಅಲ್ಲಿಯ ನೆಲವನ್ನು ಕೆದರಿದರೆ, ಇನ್ನೂ ರಂಜಣಿಗೆ ಹಂಚಿನ ಅವಶೇಷಗಳು ಸಿಕ್ಕುತ್ತವೆ. ಅದರ ಒಂದು ಸ್ಮರಣೆಯೂ ಮತ್ತು ಅಂದಿನ ಕಾಲದ ಆ ಮಹತ್ವದ ರಂಜಣಿಗೆಯು ಇಂದಿನ ಜನತೆಗೆ ಭಕ್ತರ ಅಭಿಲಾಷೆಯಂತೆ ಅವರ ದರ್ಶನಾರ್ಥವಾಗಿ ಕಲಬುರ್ಗಿಯ ಶ್ರೀ ಶರಣಬಸವೇಶ್ವರ ಮಹಾದಾಸೋಹ ಪೀಠದಲ್ಲಿ ಇರಿಸಲಾಗಿದೆ. ಅದರ ಮಹಿಮೆಯನ್ನು ಹೊಗಳುತ್ತಾ ಎಲ್. ಬಸವರಾಜು ಅವರ ಕೃತಿ ಶರಣಬಸವ ಸಂಪುಟ ೧೯೮೪ ಈ ರೀತಿಯಲ್ಲಿ ವಿವರಣೆ ನೀಡಿರುವರು: "ಶರಣನ ಹೊಲದಲ್ಲಿ ತುಡುಗು ದನಗಳಿಗೆ, ಕಳ್ಳ ಜನಗಳಿಗೆ ತೆನೆ ಸೂರೆ ಹೋದ ಮೇಲೂ ಜೋಳ ರಾಶಿ ರಾಶಿಯಾಯಿತೆಂದು" ಕೊಂಡಾಡಿದ್ದಾರೆ.

೬. ಪತ್ರೀವನದ ಮಾಹಿತಿ

ಶರಣಬಸವೇಶ್ವರರು ತಮ್ಮ ಲಿಂಗಾರ್ಚನೆಗಾಗಿ ದಿನಾಲು ಪತ್ರಿಗಳನ್ನಾಯ್ದು ತರಲು ಪತ್ರೀವನಕ್ಕೆ ಹೊತ್ತು ಹರಿಯುವ ಮುನ್ನವೇ ಹೋಗುತ್ತಿದ್ದರು. ಈ ಪತ್ರೀವನವು ಅರಳಗುಂಡಿಗೆಯಿಂದ ಪೂರ್ವಕ್ಕೆ ಸುಮಾರು ೪ ಕಿ.ಮೀ.ಗಳ ಅಂತರದಲ್ಲಿದೆ. ಹಿಪ್ಪರಿಗೆಯ ಗ್ರಾಮಕ್ಕೆ ಸಮೀಪವಾಗಿರುವುದರಿಂದ ಇದಕ್ಕೆ "ಹಿಪ್ಪರಿಗೆಯ ಪತ್ರೀವನ"ವೆಂದೇ ಜನರು ಕರೆಯುತ್ತಾರೆ. ಕಾಡುಹಾದಿಯಿಂದ ಕೂಡಿದ ಈ ಸ್ಥಳ ಇಂದಿಗೂ ನಿರ್ಜನ ಪ್ರದೇಶವಾಗಿ ಕಾಣುತ್ತದೆ. ಶರಣಬಸವರನ್ನು ಸುಲಿದುಕೊಳ್ಳಲೆಂದು ಬಂದ ಕಳ್ಳರು, ಶರಣಬಸವರ ಘನ ವ್ಯಕ್ತಿತ್ವದ ಪ್ರಭಾವದಿಂದ ಪರಿವರ್ತನೆಗೊಂಡು ಸನ್ಮಾರ್ಗಿಗಳಾದುದು ಇದೇ ಪತ್ರೀವನದಲ್ಲಿ.

ದಾಸೋಹ ನಡೆಸಲು ಸಾಲ ಕೊಟ್ಟವರ ಮನೆತನ, ಶರಣಬಸವೇಶ್ವರರು ತಮ್ಮ ಅನ್ನ ದಾಸೋಹಕ್ಕೆ ಎಷ್ಟು ದವಸ-ಧಾನ್ಯಗಳನ್ನು ಪೂರೈಸಿದರೂ, ಇನ್ನೂ ಪೂರೈಸಬೇಕೆಂಬ ಹಂಬಲ ಹಿರಿದಾಗಿ ಮೂಡಿತು. ದಿನನಿತ್ಯವೂ ಶರಣಬಸವರ ಮನೆಯು ದಾಸೋಹ ಪ್ರಸಾದ ಸ್ವೀಕರಿಸಲು ಬಂದ ಹರ-ಗುರು-ಚರಮೂರ್ತಿಗಳಿಂದ ಕಿಕ್ಕಿರಿಯುತ್ತಿದ್ದಿತು. ೧೨ನೆಯ ಶತಮಾನದ ಬಸವಣ್ಣನವರ ಮಹಾಮನೆಯಂತೆ ಅರಳಗುಂಡಿಗೆಯ ಶರಣಬಸವರ ಮನೆಯು ಕಂಗೊಳಿಸುತ್ತಿತ್ತು. ಒಂದು ದಿನ ಶರಣಬಸವರಿಗೆ ಸತ್ವ ಪರೀಕ್ಷೆಯ ಕಾಲ ಒದಗಿಬಂದಿತು. ಬಂದ ಸಕಲ ಜೀವರಾಶಿಗಳ ಸಂತೃಪ್ತಿಗಾಗಿ, ಮಿತಿಯಿಲ್ಲದಂತೆ ದವಸ ಧಾನ್ಯ ಸವೆಯುತ್ತಿದೆ. ಇನ್ನೇನು? ಒಂದೆರಡು ದಿನಗಳಿಗೆ ಮಾತ್ರ ಸಾಲುವಷ್ಟು ಸಾಮಗ್ರಿ ಉಳಿದುಕೊಂಡಿವೆ. ಮುಂದೇನು? ಈ ಶಿವಚಿಂತೆ ಶರಣರನ್ನು ನಸುಬಾಧಿಸಿತು. ಶಿವನಿದ್ದಾನೆಂದು ಮೊರಟಗಿಯ ಹಾದಿ ಹಿಡಿದರು. ಮೊರಟಗಿಯ ಕಲ್ಲಪ್ಪ ಶ್ರೀಗಿರಿಯವರಿಂದ ಸಾಲ ಪಡೆದು ತಂದು, ಮಹಾದಾಸೋಹ ಕಾರ್ಯ ನಿರ್ವಿಘ್ನಗೊಳಿಸಿದರು. ಮೊನ್ನೆ ಮೊನ್ನೆಯತನಕವೂ ಶರಣಬಸವೇಶ್ವರರಿಗೆ ಸಾಲ ಕೊಟ್ಟಂತೆ, ಅವರ ಸಾಲ ಮರಳಿಸಿದಂತೆ ದಾಖಲೆಗಳಿದ್ದ ಖಾತೆಗಳು ಅವರ ಮನೆಯಲ್ಲಿದ್ದವು. ಆದರೆ ಮನೆಯು ಬಿದ್ದು ಅವೆಲ್ಲ ನಾಶವಾಗಿ ಹೋದುವೆಂದು ಆ ವಂಶಸ್ಥರ ಹೆಣ್ಣು ಮಕ್ಕಳ ಕಡೆಯ ಸಂಬಂಧದವರು ಈ ವಿಚಾರ ಕ್ಷೇತ್ರಕಾರ್ಯದಿಂದ ತಿಳಿಯಪಡಿಸಿದರು(ಹಿರೇಮಠ ೨೦೧೦: ೬೧, ೬೩. ೬೪).[೭]

೭. ರಾಮಜೀ ದಾದಾನ ವಿಷಯ

ಇಲ್ಲಿ ಪ್ರಸ್ತುತವಾಗಿರುವ ಹೆಸರು ಅತ್ಯಂತ ಮುಖ್ಯವಾದದು. ಕಾರಣ ಕಲ್ಲಪ್ಪ ಶ್ರೀಗಿರಿಯವರ ಮನೆ ಗುಮಾಸ್ತನಾಗಿದ್ದನು. ಈತನು ಒಂದು ದಿನ ಕಲ್ಲಪ್ಪ ನೀಡಿದ ಸಾಲವನ್ನು ಕೇಳಲು ರಾಮಜೀ ಹೋದಾಗ ಅಲೌಕಿಕ ರೀತಿಯಲ್ಲಿ ಸಾಲ ಸಂದಾಯವಾದ ಬಗೆಯನ್ನು ಕಲ್ಲಪ್ಪನ ಬಾಯಿಯಿಂದಲೇ ಕೇಳಿ ಚಕಿತಗೊಂಡಿದ್ದನೆಂದು ಇದರಿಂದ ಶರಣಬಸವೇಶ್ವರ ದೈವಶಕ್ತಿಯು ಅವನ ಮೇಲೆ ಗಾಢವಾದ ಪರಿಣಾಮ ಬೀರಿತು. ಮುಂದೆ ರಾಮಜೀ ದಾದಾನು ಸಾಹುಕಾರನ ಸೇವೆ ತೊರೆದು ಅರಳುಗುಂಡಿಗೆಯಲ್ಲಿಯೇ ಬಂದು ನೆಲೆಸಿದ್ದನೆಂದು ಜನರು ತಿಳಿಸಿದ್ದಾರೆ. ಈತನ ಸಮಾಧಿಯು ಗುಲಬರ್ಗಾದ ಬ್ರಹ್ಮಪುರ ನಗರದ ಶರಣಬಸವೇಶ್ವರರ ಹಳೆಯ ಮನೆಯಲ್ಲಿಯೇ ಇದೆ (ಹಿರೇಮಠ ೨೦೧೦: ೬೯).

೮. ಅರಳಗುಂಡಿಗೆ ಬಿಡುವುದಕ್ಕೆ ಒದಗಿದ ಪ್ರಸಂಗಗಳು: ಹಿರೇಗೌಡ ಸಂತಾನ ಫಲದ ಕೃಪೆ

ಶರಣಬಸವೇಶ್ವರರಿಗೆ ಬಹುದಿವಸಗಳಿಂದಲೂ ಬಸವಣ್ಣನವರು ನೆಲೆಸಿದ ಕಲ್ಯಾಣಕ್ಕೆ ಭೇಟಿ ಕೊಡಬೇಕೆಂಬ ಆಶೆಯಿತ್ತೆಂದು ದಾಖಲೆಗಳಿಂದ ತಿಳಿದುಬರುತ್ತದೆ. ಆದರೆ ಕಾಲಾವಕಾಶ ಮಾಡಿಕೊಡದ ಕಾರಣ ಅದು ಸಾಧ್ಯವಾಗಿದ್ದಿಲ್ಲ. ಒಂದು ದಿನ ಊರಿನಲ್ಲಿ ಉಂಟಾದ ದ್ವೇಷವನ್ನು ದಮನಗೊಳಿಸಲು, ಅನ್ಯರ ಮನವನ್ನು ನೋಯಿಸದೆ ಶರಣಬಸವರೇ ಅರಳಗುಂಡಿಗೆಯನ್ನು ಬಿಟ್ಟು ಹೊರಡಲು ನಿಶ್ಚಯಿಸಿದ್ದರಂತೆ. ಕಾರಣ, ಕಡಕೋಳ ಮಡಿವಾಳರ ದೀಕ್ಷಾ ಪ್ರಸಂಗದಿಂದ ಉಂಟಾದ ಮತೀಯ ಸಮಸ್ಯೆ, ಕ್ರಿಯಾಮೂರ್ತಿ ಬಸಯ್ಯನ ಪ್ರತಿಭಟನೆಗಳು ಪೆಡಂಭೂತವಾಗಿ ಬೆಳೆದು ನಿಂತಿದ್ದವು. ಆದ್ದರಿಂದ ಬೇಸತ್ತು ಶರಣಬಸವೇಶ್ವರರು ಅರಳಗುಂಡಿಗೆ ತೊರೆದರು. ಇದರಿಂದ ಅಂದಿನ ಕಾಲದಲ್ಲೂ ಜಾತಿ, ಧರ್ಮ, ಮತ, ದ್ವೇಷಿಗಳು ಶರಣರನ್ನೂ ಬಿಡದೆ ಆಹುತಿ ಪಡೆದಿದ್ದು ನಮ್ಮ ಗಮನ ಸೆಳೆಯುತ್ತದೆ.

ಹಿರೇಗೌಡ ಮತ್ತು ಧೂಳವ್ವ ದಂಪತಿಗಳಿಗೆ ಸಂತಾನವಿರದ ಕಾರಣ ಶರಣಬಸವರನ್ನೇ ಪುತ್ರನಂತೆ ನಂಬಿದರೂ ಶರಣಬಸವ ಊರನ್ನು ತ್ಯಜಿಸಿದ ವಿಷಯ ಕೇಳಿ ಆತನನ್ನು ತಡೆಯಲು ಬಂದರು. ಅಂದು ಅವರಿಗೆ ಆಶೀರ್ವದಿಸಿ ಸಂತಾನ ಫಲ ಪಡೆಯುವಂತೆ ವಾಗ್ದಾನ ಮಾಡಿದರು.

೯. ಶರಣಬಸವೇಶ್ವರರ ಸಂಚರಿತ ಮಾರ್ಗ ಹಾಗೂ ಸ್ಥಳ ಸ್ಮಾರಕಗಳು

ಅರಳಗುಂಡಿಗೆಯನ್ನು ಬಿಟ್ಟು ಶರಣರು ಪತ್ರೀವನದ ಮಾರ್ಗವಾಗಿ ಕುಮ್ಮನ ಸಿರಸಿಗೆಯ ಮೇಲಿಂದ ಹಾಯ್ದು ಕ್ಯಾವನೂರಿನ ಹತ್ತಿರದ ಸವಳ ಹಳ್ಳಕ್ಕೆ ಬಂದರು. ಅಲ್ಲಿ 'ಶಿವಯೋಗ'ವನ್ನು ಆಚರಿಸಿ ಮರುದಿವಸ ಆ ಸ್ಥಳವನ್ನು ಬಿಟ್ಟು ಮುನ್ನಡೆದರು. ಇದರ ಸ್ಮರಣಾರ್ಥವಾಗಿ ಅಲ್ಲಿ ಶರಣರ ಮಂದಿರ ದಾಸೋಹ ಮನೆ ಕಟ್ಟಿಸಿ ಕಾರ್ಯವನ್ನು ಮುಂದುವರೆಸಿಕೊಂಡು ಬರುತ್ತಿವೆ. ನಂತರ ಸವಳ ಮಾರ್ಗವಾಗಿ ಜನವಾಡ, ಹರವಾಳದಿಂದ ಬೆಳಗುಂಪಿಗೆ ಬಂದರು. ಇಲ್ಲಿಯೇ ಶರಣಬಸವೇಶ್ವರರು ಭೀಮಾನದಿಯನ್ನು ದಾಟಿದುದು.

ಬೆಳಗುಂಪಿ ಕಲಬುರ್ಗಿ ತಾಲೂಕಿನಲ್ಲಿರುವ ಭೀಮಾತೀರದ ಚಿಕ್ಕಗ್ರಾಮ. ಇಲ್ಲಿ ಹಿರೇಮಠವು ಪುತ್ರವರ್ಗ ಪರಂಪರೆಗೆ ಸೇರಿದ ಮಠವಾಗಿದೆ. ಇದರ ಪೀಠ ಬಾಳೇಹಳ್ಳಿ ಸಿಂಹಾಸನ. ಇದರ ಮೂಲ ಸ್ಥಾಪಕರು

ಪ್ರಭುಸ್ವಾಮಿಗಳು. ಆದರೆ, ಶರಣಬಸವೇಶ್ವರ ಸಮಕಾಲೀನ ಸ್ವಾಮಿಗಳೆಂದರೆ ಸಿದ್ಧಪ್ರಭು ಸ್ವಾಮಿಗಳು ಮಾತ್ರ. ಅವರ ಆತಿಥ್ಯವನ್ನು ಸ್ವೀಕರಿಸಿ ಅವರು ಪ್ರಯಾಣ ಮುಂದುವರೆಸಿ, ಅವರಾದಿಯ ದಂಡರಾಯಗೌಡರ ಪರಿಚಯವಾಯಿತು. ಅವರಾದಿಯು ಕಲಬುರ್ಗಿಯ ತಾಲೂಕಿನ ಸಣ್ಣಗ್ರಾಮ. ದಂಡರಾಯಗೌಡರು ಅವರ ದಾಸೋಹಕ್ಕೆ ಸಿದ್ಧತೆ ಮಾಡಬೇಕಿತ್ತು. ಅಂದು ಧಾರಾಕಾರವಾದ ಮಳೆ ಸುರಿಯುತ್ತಿದ್ದರೂ ದಂಡರಾಯಗೌಡರು, ತಮ್ಮ ಮನೆಯ ಜಂತಿಗಳನ್ನೇ ತೆಗೆದು ದಾಸೋಹಕ್ಕೆ ಉರುವಲಾಗಿ ಬಳಸಿದರೆಂದು ಜನರು ಸ್ಪಷ್ಟಪಡಿಸುವರು. ಮುಂದೆ ಅವರು ಪರ್ವತಾಬಾದ ಈಗಿನ ಫರತಾಬಾದ್‌ಗೆ ಬಂದಾಗ ಕ್ರಿ.ಶ. ೧೭೬೨ರಲ್ಲಿ ಭೀಕರ ಬರಗಾಲ ಕಾಣಿಸಿಕೊಂಡಿತು. ಇದರ ಪರಿಣಾಮದಿಂದ ಸಾವಿರಾರು ಜನರು ಸಾವಿಗೀಡಾದರು. ಈ ಬರಕ್ಕೆ 'ಡೋಗಿ ಬರ' ಎಂದು ಕರೆಯುತ್ತಾರೆ. ಅಲ್ಲಿ ಶರಣಬಸವೇಶ್ವರರು ದಾಸೋಹ ನಡೆಸಿ ಧನ್ಯರಾದರು. ಮುಂದೆ ಕಲಬುರ್ಗಿಯ ದೊಡ್ಡಪ್ಪಗೌಡರ ಬಿನ್ನಹದಂತೆ ಕಲಬುರ್ಗಿಯತ್ತ ಸಾಗಿದರು. ಅಂದಿನಿಂದ ಪರ್ವತಾಬಾದನಲ್ಲಿ ಶರಣಬಸವನ ಹೆಸರಿನಲ್ಲಿ ಜಾತ್ರೆ ದಾಸೋಹ ಕಾರ್ಯ ನಡೆದಿದೆ.

೧೦. ಗುಲಬರ್ಗಾದ ದೊಡ್ಡಪ್ಪಗೌಡರ ಮನೆತನ

ಶರಣಬಸವರನ್ನು ಕಲ್ಯಾಣಕ್ಕೆ ಬಿಡದೆ ಕಲ್ಯಾಣದ ಪರಿಸರವನ್ನೇ ಗುಲಬರ್ಗಾದಲ್ಲಿ ನಿರ್ಮಿಸಿ, ಅವರನ್ನು ಕಲಬುರ್ಗಿಯಲ್ಲೇ ಹಿಡಿದು ನಿಲ್ಲಿಸಿದ, ಮಹಾಶರಣಶಕ್ತಿ ಆದಿ ದೊಡ್ಡಪ್ಪಗೌಡರು. ಇವರು ಮೂಲತಃ ಕಲಬುರ್ಗಿ ತಾಲೂಕಿನ ಶಿರಸಿ ಗ್ರಾಮದ ಗೌಡರಾಗಿದ್ದರು. ಬ್ರಹ್ಮಪುರದ ಗೌಡಕಿ ಇದ್ದ ಕಾರಣ ಅವರು ಬ್ರಹ್ಮಪುರದಲ್ಲಿ ವಾಸವಾಗಿದ್ದರು. ದೊಡ್ಡಪ್ಪ ಶರಣರು ವ್ಯಾಪಾರಕ್ಕೆಂದು ಫರತಾಬಾದ್‌ಗೆ ಹೋದಾಗ ಶರಣಬಸವರ ಭಕ್ತಿ ಪರಾಕಾಷ್ಠೆಗೆ ಮಾರುಹೋಗಿ ಅವರನ್ನು ತಮ್ಮ ಮನೆಗೆ ಆಹ್ವಾನಿಸಿದರು. ಅದಕ್ಕೆ ಒಪ್ಪಿಕೊಂಡು ಶರಣಬಸವರು ಹಾರೈಸಿ ಬಂದರು (ಹಿರೇಮಠ ೨೦೧೦: ೭೦, ೭೧, ೭೩, ೭೪, ೭೮). ಚೆನ್ನಪ್ಪ ವಯಸ್ಸಾದ ವೃದ್ಧ, ಶರಣಬಸವರಲ್ಲಿಗೆ ಒಂದು ಸಾವಿರ ರೂಪಾಯಿಯ ಕಾಣಿಕೆ ನೀಡಿ ಪುತ್ರನನ್ನು ದಯಪಾಲಿಸುವಂತೆ ಬೇಡಿದನು. ಶರಣಬಸವರು ಧೃತಿಗೆಡದೆ, ಮೀನ-ಮೇಷ ಎಣಿಸಲಿಲ್ಲ. ದೇವರ ಇಚ್ಛೆಯೆಂದು ದೊಡ್ಡಪ್ಪಗೌಡರ ಮಗುವನ್ನು ತೊಟ್ಟಿಲಿನಿಂದ ಎತ್ತಿ ತಂದು ಅಪೇಕ್ಷಿತ ಭಕ್ತನಿಗೆ ನೀಡಿದರು. ಒಮ್ಮನದ ಚೆನ್ನಪ್ಪ ಸಂತಸದಿಂದ ಮರಳಿದನು. ಗೌಡದಂಪತಿಗಳು ತಮ್ಮ ಮಗು ಶರಣಬಸವರ ಮಹಾದಾಸೋಹ ಕಾರ್ಯಕ್ಕೆ ಸಲ್ಲಿತೆಂದು ಸಂತಸಗೊಂಡರು. ಶರಣಬಸವರು ಕಲ್ಯಾಣಕ್ಕೆ ಹೋಗುವ ಇಚ್ಛೆ ಕೈಬಿಟ್ಟು, ಸಕಲಜೀವಚರ ಉದ್ಧಾರದಲ್ಲಿಯೇ ಕಲ್ಯಾಣವನ್ನು ಕಾಣುತ್ತ ಕಲಬುರ್ಗಿ ಪ್ರದೇಶಕ್ಕೆ ತಮ್ಮ ದಾಸೋಹದ ಆಶ್ರಯ ನೀಡಿ ಶರಣಬಸವರು ದಾಸೋಹದ ತವನಿಧಿಗಳಾಗಿ ನೆಲೆ ನಿಂತರು. ಶರಣಬಸವರಿಗೆ ಮುಗಳಗಾವಿ ಹಿರೇಮಠದ ಸಿದ್ಧೇಶ್ವರ ಸ್ವಾಮಿಗಳು ಕ್ರಿಯಾಮೂರ್ತಿಗಳಾಗಿ ಬಂದರು. ಶರಣಬಸವರ ಲಿಂಗೈಕ್ಯದ ಅನಂತರದಲ್ಲಿ ೨೬ ವರ್ಷಗಳವರೆಗೆ, ಅವರ ದಾಸೋಹ ಪೀಠದ ಅಧಿಪತಿಗಳಾಗಿ ದೊಡ್ಡಪ್ಪ ಶರಣರು ದಾಸೋಹ ಕಾರ್ಯವನ್ನು ನಡೆಸಿಕೊಂಡು ಬಂದರು. ಇಂದು ಶರಣಬಸವೇಶ್ವರ ದೇವಾಲಯದ ಎದುರುಗಡೆ ಇರುವುದೇ ಆದಿ ದೊಡ್ಡಪ್ಪ ಶರಣರ ಸಮಾಧಿ (ಹಿರೇಮಠ ೨೦೧೦: ೭೮).

ಶರಣಬಸವೇಶ್ವರರು ಈ ಭಾಗದಲ್ಲಿ ಹಿಂದೂ-ಮುಸ್ಲಿಂಮರ ಭಾವೈಕ್ಯತೆಗಾಗಿ ಬಹುವಾಗಿ ಶ್ರಮಿಸಿದರು. ಒಂದು ಸಲ ಶರಣರು ಬಂದೇನವಾಜರ ದರ್ಗಾಕ್ಕೆ ಭೇಟಿ ನೀಡಿದರು. ಅಲ್ಲೊಂದು ಲೀಲೆಯನ್ನು ಮಾಡಿದಂತೆ ಪುರಾಣಗಳು ಉಲ್ಲೇಖಿಸಿವೆ. ಇಂದಿಗೂ ಬಂದೇನವಾಜರ ದರ್ಗಾದಲ್ಲಿ ಶರಣಬಸವರು ಕುಳಿತುಕೊಂಡಿದ್ದ ಸ್ಥಳವನ್ನು ತೋರಿಸುತ್ತಾರೆ. ಇದರ ನೆನಪಿಗಾಗಿಯೇ ಶರಣಬಸವೇಶ್ವರ ರಥೋತ್ಸವದ ಸಮಯಕ್ಕೆ ದರ್ಗಾದಿಂದ ಹೂ-ಗಂಧದ ಕಡ್ಡಿಗಳನ್ನು ಕಳಿಸುವ ಪದ್ಧತಿ ಅಲ್ಲಿನ ಸಜ್ಜಾದಿಗಳು ಪಾಲಿಸಿಕೊಂಡು ಬರುತ್ತಿರುವರು (ಹಿರೇಮಠ ೧೯೮೬: ೭೮).

### ೧೧. ಸುಲೇಪೇಟೆಯ ಖಟ್ವಾಂಗೇಶ್ವರ ಮಠಕ್ಕೆ ಭೇಟಿ-ಬೇದಾಡೆ ಪಡೆ

ಶರಣಬಸವೇಶ್ವರರ ಸಮಕಾಲೀನರಾದ ಈ ಮಠದ ಸಿದ್ಧಲಿಂಗ ಸ್ವಾಮಿಗಳು(೧೭೫೦-೧೮೪೫) ತಮ್ಮ ಕಾಲದಲ್ಲಿ ಇದ್ದು ೧೯ ಬಸವಪುರಾಣ ಮಂಗಲಕಾರ್ಯಕ್ರಮಕ್ಕೆ ಒದಗಿದ ವಿಪತ್ತು ನಿವಾರಿಸಲು, ಶರಣರು ಸ್ವಾಮಿಗಳ ಬಿನ್ನಹದ ಮೇರೆಗೆ ಹೋದರು. ನಿಜಾಮ ಸೈನ್ಯದ ಬೇದಾಡೆ ಪಡೆಯವರು ಪುರಾಣಕಾರ್ಯಕ್ರಮಕ್ಕೆ ಅಡ್ಡಿಯನ್ನುಂಟು ಮಾಡಿ ಊರೆಲ್ಲ ಸುಲಿಗೆ ಮಾಡುವುದರಲ್ಲಿ ತೊಡಗಿದ್ದರು. ಈ ಪಡೆಯ ಮೇಲೆ ಉಂಟಾದ ಶರಣಬಸವರ ಪ್ರಭಾವದ ಬಗ್ಗೆ ಹೆಚ್ಚಿನ ವಿವರಗಳು ಇಂತಿವೆ. ಗೂಡಾಸಾಬ ಬೇದಾಡೆ ಪಡೆಯಲ್ಲಿದ್ದ ಒಬ್ಬ ಸೈನಿಕ. ಅವನು ಶರಣಬಸವರ ಉಪದೇಶದಿಂದ ಪರಿವರ್ತನೆಗೊಂಡು ಹಿಂಸೆ, ದಬ್ಬಾಳಿಕೆಯನ್ನು ತ್ಯಜಿಸಿ, ಸುಲೇಪೇಟೆಯಲ್ಲಿಯೇ ಉಳಿದುಬಿಟ್ಟನು.

### ೧೨. ದೇವರಾಯ ದೇಶಮುಖರ ಮನೆತನ(೧೭೮೦-೧೮೭೧)

ಪಾಂಡುರಂಗ ದೇಶಮುಖ-ರಾಧಾಬಾಯಿ ದಂಪತಿಗಳ ಮಗ ಪಾಂಡುರಂಗ ದೇಶಮುಖರು ನಿಜಾಮ ಅರಸರ ಆಳ್ವಿಕೆಯಲ್ಲಿ ಕಲಬುರ್ಗಿ ಪ್ರಾಂತ್ಯದ ದೇಶಮುಖಗಿರಿಯನ್ನು ನೆರವೇರಿಸುತ್ತಿದ್ದರು. ಆತನ ಹೆಂಡತಿ ಯಶೋಧರಮ್ಮಳು ಮದುವಣಗಿತ್ತಿಯಾದಾಗಿನಿಂದಲೂ ಸೊಂಟದ ನೋವಿನಿಂದ ಬಳಲುತ್ತಿದ್ದಳು. ದೇಶಮುಖರ ಪ್ರಾರ್ಥನೆಯಂತೆ ಬಸವರು ಭಸ್ಮ ನೀಡಿ ರೋಗ ನಿವಾರಿಸಿದರು.

ದೇಶಮುಖ ದಂಪತಿಗಳು ಹೆಣ್ಣು ಮಗು ಹೊಂದಿದ್ದರು. ಇಂದಿಗೂ ದೇಶಮುಖ ಮನೆತನದವರು ಶರಣಬಸವೇಶ್ವರರ ರಥೋತ್ಸವದ ಸಂದರ್ಭದಲ್ಲಿ ದೇಶಮುಖ ಮನೆತನದಿಂದ ಶರಣಪೀಠಾಧಿಪತಿಗಳಿಗೆ ಉಡುಗೊರೆ ಬರುತ್ತದೆ. ಅನಂತರ ರಥ ಮುಂದೆ ಸಾಗುತ್ತದೆ(ಹಿರೇಮಠ ೧೯೮೬: ೭೯).

### ೧೩. ಸುರಪುರ ಅರಸು ವೆಂಕಟಪ್ಪನಾಯಕನ ಕಾಣಿಕೆ

ಶರಣಬಸವೇಶ್ವರರಿಗೆ ಸುರಪುರದ ಅರಸ ವೆಂಕಟಪ್ಪನಾಯ್ಕನು ಕಾಣಿಕೆ ಕಳುಹಿಸಿಕೊಟ್ಟನೆಂಬುದಕ್ಕೆ ಐತಿಹಾಸಿಕ ಆಧಾರಗಳು ನಮಗೆ ದೊರೆತಿಲ್ಲ. ಇಲ್ಲಿ ಎದ್ದು ನಿಲ್ಲುವ ಒಂದು ಪ್ರಶ್ನೆಯೆಂದರೆ ಯಾವ ವೆಂಕಟಪ್ಪನಾಯ್ಕನು ಶರಣರಿಗೆ ಕಾಣಿಕೆ ಕಳುಹಿಸಿದನು? ಕಾರಣ, ಸುರಪುರ ಅರಸರಲ್ಲಿ ನಾಲ್ಕು ಜನ ವೆಂಕಟಪ್ಪನಾಯ್ಕರು ಬರುತ್ತಾರೆ. ಪುರಾಣಗಳಲ್ಲಿ ಇದು ಕೊನೆಯ ಘಟನೆಯಾಗಿ ಬರುವುದರಿಂದ,

ಶರಣಬಸವೇಶ್ವರರ ಲಿಂಗೈಕ್ಯಕಾಲಕ್ಕೆ ಮುನ್ನ ಈ ಪ್ರಸಂಗ ನಡೆದ ಸಾಧ್ಯತೆಯಿದೆ. ಶರಣಬಸವರ ಲಿಂಗೈಕ್ಯಕಾಲ(೧೮೨೨) ಈ ದೃಷ್ಟಿಯಿಂದ ವಿಚಾರಿಸಿದರೆ ಕ್ರಿ.ಶ. ೧೮೧೦-೧೮೪೨ರ ನಡುವೆ ಆಳ್ವಿಕೆ ಮಾಡಿದ ನಾಲ್ಕನೆಯ ವೆಂಕಟಪ್ಪನಾಯ್ಕನೇ ಶರಣಬಸವರಿಗೆ ಕಾಣಿಕೆಯನ್ನು ಕಳುಹಿಸಿಕೊಟ್ಟಿದ್ದು ಸಂಭವನೀಯ.

೧೪. ಲಿಂಗೈಕ್ಯ ಕಾಲ! ಶರಣಬಸವರ ಗದ್ದುಗೆ ಮೇಲಿನ ಉಭಯ ಮೂರ್ತಿಗಳು ಸಂಕೇತಾರ್ಥ

೭೬ ವರ್ಷಗಳ ಕಾಲ ಮಹಾದಾಸೋಹ ಜೀವನ ನಡೆಸಿದ ಶರಣಬಸವೇಶ್ವರರು ಶಾಲಿವಾಹನ ಶಕೆ ೧೭೪೪ ಚಿತ್ರಭಾನು ಸಂವತ್ಸರ ಫಾಲ್ಗುಣ ಮಾಸ, ವದ್ಯಪ್ರತಿಪದೆ ಸೋಮವಾರದಂದು "ಲಿಂಗೈಕ್ಯರಾದರು" ಎಂಬ ಮಾಹಿತಿಯಿದೆ. ಶಾಲಿವಾಹನ ಶಕೆ ೧೭೪೪ ಇದು ಕ್ರಿ.ಶ. ೧೮೨೨ಕ್ಕೆ ಸಮವಾಗುತ್ತದೆ. ಈಗಲೂ ಇದೇ ತಿಥಿಯಂದು ಶ್ರೀ ಶರಣಬಸವರ ರಥೋತ್ಸವವು ಕಲಬುರ್ಗಿಯಲ್ಲಿ ಜರುಗುತ್ತದೆ.

ಶರಣಬಸವೇಶ್ವರರ ಕರ್ತೃಗದ್ದುಗೆ ಕಲಬುರ್ಗಿಯಲ್ಲಿ ಲಕ್ಷಾನುಲಕ್ಷ ಭಕ್ತರ ವಾಂಛಿತವನ್ನು ಪೂರೈಸುತ್ತಾ ಚೇತನಶಕ್ತಿಯಾಗಿ ರಾರಾಜಿಸುತ್ತಲಿದೆ. ಅಂದು ಶರಣಬಸವರು ತಮ್ಮ ಲಿಂಗಾರ್ಚನೆಯ ಸಮಯಕ್ಕೆ ಹಚ್ಚಿದ ನಂದಾದೀಪವು ಇಂದಿಗೂ ದಾಸೋಹ ಮಹಾಮನೆಯ ಪೂಜಾಗೃಹದಲ್ಲಿ ತೊಳಗಿ ಬೆಳಗುತ್ತಲಿದೆ. ಶರಣಬಸವೇಶ್ವರರ ಸಾಂಕೇತಿಕ ಅರ್ಥವನ್ನು ಪಡೆದಿವೆ. ಕರ್ತೃಗದ್ದುಗೆಯ ಮೇಲೆ ಒಂದೇ ರೂಪದ ಎರಡು ಮೂರ್ತಿಗಳು ಸ್ಥಾಪನೆಗೊಂಡಿವೆ. ಬಲಗಡೆಯದು ಗುರು ಮರುಳಾರಾಧ್ಯರ ಮೂರ್ತಿ ಎಡಗಡೆಯದು ಶಿಷ್ಯ ಶರಣಬಸವರ ಮೂರ್ತಿ. ಇಲ್ಲಿ ಗುರು-ಶಿಷ್ಯ ಸಾಮರಸ್ಯದ ತಾತ್ವಿಕ ಅರ್ಥವಿದೆ. ವೀರಶೈವ ಸಿದ್ಧಾಂತದನ್ವಯ ಐಕ್ಯಸ್ಥಿತಿಯಲ್ಲಿ ಶಿಷ್ಯನೂ ಸಹ ಗುರು ಸ್ವರೂಪನೇ ಆಗುತ್ತಾನೆ. ಇದುವೇ ಲಿಂಗಾಂಗ ಸಾಮರಸ್ಯ ಸ್ಥಿತಿಯಾಗಿದೆ. ಎಂದು ಕೃತಿಯಲ್ಲಿ ವಿವರಿಸಿದ್ದು ಕಾಣುತ್ತೇವೆ.(ಹಿರೇಮಠ ೨೦೧೦: ೮೬-೮೭)

೧೫. ಶರಣಬಸವೇಶ್ವರರ ಕಾಲಾವಧಿಯ ನಿಜಾಮ ದೊರೆಗಳು

ಶರಣಬಸವೇಶ್ವರರ ಕಾಲಾವಧಿಯಲ್ಲಿ ಆಳಿದ ನಿಜಾಮ ವಂಶಾವಳಿ ಬಗೆಗೆ ಈ ಅಧ್ಯಯನದ ಹಿನ್ನೆಲೆಯಾಗಿ ತೆಗೆದುಕೊಳ್ಳಲಾಗಿದೆ.

೧. ನಿಜಾಮ್-ಉಲ್-ಮುಲ್ಕ್ ಅಸಫ್‌ಜಾಹ(ಕ್ರಿ.ಶ. ೧೭೨೪-೧೭೪೮)

೨. ನಾಸೀರಜಂಗ-ಮುಜಾಫರ್‌ಜಂಗ್(ಕ್ರಿ.ಶ. ೧೭೪೮-೧೭೫೦)

೩. ಸಲಾಬತ್ ಜಂಗ್(ಕ್ರಿ.ಶ. ೧೭೬೧-೧೮೦೩)

೪. ಸಿಕಂದರ್‌ಜಾಹ(ಕ್ರಿ.ಶ. ೧೮೦೩-೧೮೨೯)

ಪರಮತೀಯರ ಆಡಳಿತ ಕಾಲದಲ್ಲಿ ಹಿಂದೂಗಳಿಗೆ ಸ್ವರಾಜ್ಯ ಸ್ಥಾಪನೆಯಂತೂ ಸಾಧ್ಯವಿರಲಿಲ್ಲ. ಆದರೆ ಶರಣಬಸವೇಶ್ವರರು ಈ ಪ್ರದೇಶದಲ್ಲಿ ಆ ಕಾಲಕ್ಕೆ ಜೀವಿಸಿದ್ದುದರಿಂದ ಸ್ವಧರ್ಮ, ಸ್ವಸಂಸ್ಕೃತಿಯ ರಕ್ಷಣೆಗೆ ಅನುವು ದೊರಕಿತು. ಜೊತೆಗೆ ಈ ಪ್ರದೇಶದಲ್ಲಿ ಪ್ರಸಾರಗೊಂಡ ಸೂಫಿ ಧರ್ಮತತ್ವಗಳು ವೀರಶೈವ ಧರ್ಮ-ಸಂಸ್ಕೃತಿ ಹಾಗೂ ಸಾಹಿತ್ಯ ಇವುಗಳ ಸಂವರ್ಧನೆ ಈ ಪ್ರದೇಶದಲ್ಲಿ ಉಂಟಾಯಿತು(ಜೋಷಿ ೨೦೦೯: ೨೦೦).

ನಿಜಾಮ ಸರಕಾರ ಭೂಕಂದಾಯ ವ್ಯವಸ್ಥೆ ಅತ್ಯಂತ ಸಂಕೀರ್ಣವಾದ ವ್ಯವಸ್ಥೆಯಾಗಿತ್ತು. ಕಂದಾಯ ಆದಾಯಕ್ಕಿಂತ ರಾಜ್ಯದ ಖರ್ಚು ಅಧಿಕವಾಗಿತ್ತು. ಇದರಿಂದ ಆರ್ಥಿಕ ಬಿಕ್ಕಟ್ಟು ತಲೆದೋರಿತ್ತು. ಅಶಾಂತಿ, ಅಸೌಖ್ಯಗಳಿಂದಾಗಿ ಅಲ್ಲಲ್ಲಿ ಚಿಕ್ಕ-ಪುಟ್ಟ ಬಂಡುಗಳು ಏಳುತ್ತಿದ್ದವು. ಎಲ್ಲ ಕಡೆಗೆ ಲಂಚ, ಬಡತನ, ದಬ್ಬಾಳಿಕೆ, ಸುಲಿಗೆ-ಕಳ್ಳತನಗಳು ಹೆಚ್ಚಾಗಿದ್ದವು. ನಾವು ಇದನ್ನು ಗುರುಲಿಂಗ ಸಿದ್ಧಕವಿಯ ಶರಣಬಸವ ಪುರಾಣದಲ್ಲಿ ಶರಣ ಬಸವರ ಮೇಲೆ ಕಳ್ಳರ ಗುಂಪು ದಾಳಿ ಮಾಡಿದ ವಿಷಯವನ್ನು ಇಲ್ಲಿಸ್ಮರಿಸಬಹುದು.

....ಬಹಳ ರಾತ್ರಿಯೊಳಗೆದ್ದಡವಿ

ಪತ್ತರಿಗಳಂ ತೆಮುನ್ಮತ್ತ ಮೊದಲಾದ ಸುಮ

ವೆತ್ತುತಿರೆ ಕಳ್ಳ ರಾಪೊತ್ತಿನೋಳು ಬಂದು

(ಗುರುಲಿಂಗ ಸಿದ್ಧಕವಿ- ಶ್ರೀ.ಶ.ಬ.ಪು.ಸಂ. ೧೯-೧೫)

ಜೇರುಟಗಿ ದೇವಪ್ಪ ಕ್ರೂರಕೂಡಿರಾಯ

ಚೋರರೀರ್ವರು ಅದೇ ದಾರಿಯೊಳು ಕಾದಿರ್ದು

(ಗುರುಲಿಂಗ ಸಿದ್ಧಕವಿ, ಶ್ರೀ.ಶ.ಬ.ಪು.ಸಂ. ೧೫-೨೭)

ಈ ಪುರಾಣಗಳು ಬರದಿಂದ ಜನರು ತತ್ತರಿಸಿ ಹಸಿವು ನೀಗಿಸಲು ದರೋಡೆಕೋರರಾದ ವಿಷಯವನ್ನು ತಿಳಿಸುತ್ತದೆ.

ಆಡಳಿತ ಸಮೀಕ್ಷೆಯನ್ನು ನೋಡಿದಾಗ ರಾಜಕೀಯ, ಆರ್ಥಿಕ ಕ್ಷೇತ್ರಗಳಲ್ಲಿ ನಿಜಾಮ ಅರಸರು ಮುಂದಾಗಿದ್ದರೂ ಹಿಂದೂಗಳಿಗೆ ಮತೀಯ ಆಧಾರದ ಮೇಲೆ ದ್ವೇಷ, ಅಸೂಯೆ, ಖಿನ್ನತೆಯಿಂದ ಕಾಣುತ್ತಿದ್ದು, ಆಡಳಿತದಲ್ಲಿ ಅಸಮಾನತೆಯನ್ನು ಕಾಣುತ್ತೇವೆ. ಈ ಸಂಸ್ಥಾನವನ್ನು ಅಖಂಡ ಭಾರತದಲ್ಲಿ ಸಮಾವೇಶಗೊಳಿಸುವುದಕ್ಕಾಗಿ ಸ್ವಾಮಿ ರಮಾನಂದ ತೀರ್ಥರು, ಪೂಜ್ಯ ದೊಡ್ಡಪ್ಪ ಅಪ್ಪ ಅವರು ಮುಂತಾದವರು ಈ ಪ್ರದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಮಹತ್ವದ ಪಾತ್ರ ವಹಿಸಿದರು (ಹಿರೇಮಠ ೨೦೧೦: ೧೫-೧೬).

### ೩.೩. ಶರಣಬಸವೇಶ್ವರರ ಜಾತ್ರೆಯಲ್ಲಿ ಆಚರಿಸುವ ವಿಧಿ-ವಿಧಾನಗಳು

#### ಪೀಠಿಕೆ

ಹಿಂದೂಧರ್ಮದ ಪ್ರತೀಕವಾಗಿ ಸ್ಥಾಪಿಸಲ್ಪಟ್ಟ ಗುಲಬರ್ಗಾ ಶರಣಬಸವೇಶ್ವರ ದೇವಾಲಯವು ಸಾವಿರಾರು ಸಂಖ್ಯೆಯಲ್ಲಿ ಜನರು ಸೇರುತ್ತಾರೆ. ಈ ಪುಣ್ಯಸ್ಮರಣೆ ನಿಮಿತ್ಯ ಪ್ರತಿ ವರ್ಷ ಜಾತ್ರೆಯನ್ನು ಪೀಠಾಧಿಪತಿಗಳ ನಿದರ್ಶನದ ಮೂಲಕ ಆಚರಿಸಲಾಗುತ್ತದೆ. ಈ ಜಾತ್ರೆಯಲ್ಲಿ ಕೆಲವು ಪ್ರಮುಖ ಸಾಂಪ್ರದಾಯಿಕ ವಿಧಿ-ವಿಧಾನಗಳನ್ನು ಅಳವಡಿಸಿಕೊಳ್ಳುವದರ ಮೂಲಕ ಈ ಭಾಗದಲ್ಲಿ ಅತ್ಯಂತ ಸಡಗರದಿಂದ ಆಚರಿಸುವರು.

೧. ಉಚ್ಚಾಯಿ-ಚಿಕ್ಕ ತೇರು

ಈ ವಿಧಾನವು ಉತ್ತರ ಕರ್ನಾಟಕದ ಹಲವಾರು ಜಿಲ್ಲೆಗಳಾದ ಬಿಜಾಪುರ, ಬಾಗಲಕೋಟೆ, ಬೀದರ್, ಹುಮನಾಬಾದ, ಕೊಪ್ಪಳ ಮುಂತಾದವುಗಳ ದೇವಾಲಯಗಳಲ್ಲಿ ಮುಖ್ಯ ರಥೋತ್ಸವದ ಪೂರ್ವದ ಐದುದಿನಗಳ ಕಾಲ ಆಚರಿಸುವರು. ಅದೇ ಪ್ರಕಾರವಾಗಿ ಗುಲಬರ್ಗಾದ ಶರಣಬಸವೇಶ್ವರರ ಜಾತ್ರೆಯು ಫಾಲ್ಗುಣ ಪಂಚಮಿ ಮಾರ್ಚ್ ತಿಂಗಳ ಹೋಳಿ ಹಬ್ಬವಾದ ೫ನೇ ದಿವಸ ಮುಖ್ಯ ರಥೋತ್ಸವಕ್ಕಿಂತ ಪೂರ್ವದ ನಾಲ್ಕುದಿನ ಉಚ್ಚಾಯ ಅಲಂಕರಿಸಿ ಅಯ್ಯನವರನ್ನು ಕೂಡಿಸಿ ಎಳೆಯುತ್ತಾರೆ. ಮುಂಚೂಣಿಯಲ್ಲಿ ಡೊಳ್ಳುಮೇಳ, ಬಾಜಾ, ಶಹನಾಯಿ ಮೇಳ ಹಾಗೂ ಭಜನೇ ಮೇಳಗಳಿದ್ದರೆ ಉಚ್ಚಾಯ ಹಿಂದೆ ಮಹಿಳೆಯರು ಆರತಿ ಹಿಡಿದು ಹಾಡುತ್ತಾ ಬರುತ್ತಾರೆ. ಈ ಕಾರ್ಯಕ್ರಮವು ಸಂಜೆ ವೇಳೆಯಲ್ಲಿ ಐದು ದಿನಗಳವರೆಗೆ ನಡೆದು ರಥೋತ್ಸವದ ದಿನ ಮುಕ್ತಾಯವಾಗುತ್ತದೆ. ದಿನಾಂಕ ೧೨-೦೩-೨೦೧೨ ಭಾನುವಾರದಂದು ಮಹಾದಾಸೋಹ ಪೀಠಾಧಿಪತಿ ಪೂಜ್ಯ ಡಾ. ಶರಣಬಸವಪ್ಪ ಅಪ್ಪ ಮಂಗಳಾರತಿ ಮಾಡುವ ಮೂಲಕ ಉಚ್ಚಾಯ ಮೆರವಣಿಗೆಗೆ ಚಾಲನೆ ನೀಡಿದರು(ಪ್ರಜಾವಾಣಿ ಪತ್ರಿಕೆ, ೧೨-೩-೨೦೧೨: ೧).

೨. ಪಲ್ಲಕ್ಕಿ ಉತ್ಸವ

ಪಲ್ಲಕ್ಕಿಯು ತೊಟ್ಟಿಲಾಕಾರದಲ್ಲಿದ್ದು ನಾಲ್ಕು ಕಿರುಕಾಲುಗಳು, ರಾಮನ ಬಿಲ್ಲಿನಾಕಾರದ ಕಟ್ಟಿಗೆಯ ಕಮಾನು ಮತ್ತು ಉದ್ದನೆಯ ಹೆಗಲಗಂಬ ಹೊಂದಿರುತ್ತದೆ. ಇಂತಹ ರಚನೆಗೆ 'ಪಾಲಕಿ' ಎಂದು ಕರೆಯುತ್ತಾರೆ. ಆಯಾ ದೇವರ ಐತಿಹಾಸಕ ಹಿನ್ನೆಲೆ ಆಧಾರದ ಮೇಲೆ ಪಲ್ಲಕ್ಕಿ ತೊಟ್ಟಲಿನ ಮೇಲೆ ಕೆತ್ತನೆಯ ಕೆಲಸವನ್ನು ಮಾಡಿರುತ್ತಾರೆ ಹಾಗೂ ಗೊಂಡೆಗಳಿಂದ ಅಲಂಕೃತ ಕುತನಿ ಬಟ್ಟೆಯನ್ನು ಹೊದಿಸಿ, ಮೇಲೆ ಚಿಕ್ಕ ಕಳಸ ಇಟ್ಟಿರುತ್ತಾರೆ. ಪುರವಂತರ ಸೇವೆಯೊಂದಿಗೆ ಪಲ್ಲಕ್ಕಿ ಉತ್ಸವ ಪ್ರಮುಖ ಓಣಿಯಲ್ಲಿ ಸಾಗುತ್ತಿರುವಾಗ ಭಕ್ತರು ತುಂಬಿದ ಕೊಡಗಳಿಂದ ನೀರನ್ನು ಪಲ್ಲಕ್ಕಿ ಹೊತ್ತವರ ಪಾದಗಳಿಗೆ ಸುರಿದು, ನೈವೇದ್ಯ ಸಲ್ಲಿಸಿ, ಅವರ ಪಾದಕ್ಕೆ ನಮಸ್ಕರಿಸಿ, ಆಶೀರ್ವಾದ ಪಡೆಯುತ್ತಾರೆ. ಈ ಮೆರವಣಿಗೆಯು ಮರಳಿ ದೇವಾಲಯಕ್ಕೆ ಬಂದು ತನ್ನ ಸ್ಥಳಕ್ಕೆ ಇಡಲಾಗುತ್ತೆ (ಚಪ್ಪರ ಬಂದ್ ೨೦೦೬: ೯೦).

೩. ಪರುಷ ಬಟ್ಟಲು

ಇದು ಶರಣಬಸವೇಶ್ವರರು ಊಟ ಮಾಡಿರುವ ಪ್ರಸಾದ ಬಟ್ಟಲು. ರಥೋತ್ಸವದ ದಿವಸ ಮಹಾ ಪೀಠಾಧಿಪತಿ ಪೂಜ್ಯ ಡಾ. ಶರಣಬಸವಪ್ಪ ಅಪ್ಪ ಅವರು ಬೆಳಗ್ಗೆಯಿಂದ ಉಪವಾಸವಿದ್ದು ಸಾಯಂಕಾಲ ಪೂಜೆಗೆ ಬಂದಾಗ ಅದನ್ನು ಲಕ್ಷಾಂತರ ಭಕ್ತರಿಗೆ ತೋರಿಸಿ ಅದರಿಂದ ಪ್ರಸಾದವನ್ನು ಸ್ವೀಕರಿಸುವುದರ ಮೂಲಕ ರಥೋತ್ಸವಕ್ಕೆ ಚಾಲನೆ ನೀಡುವರು. ಅದಲ್ಲದೆ ಭಕ್ತಾದಿಗಳು ಕೂಡ ಉಪವಾಸವನ್ನು ಮುಕ್ತಾಯಗೊಳಿಸುವವರು. ಅದೇ ಸಂದರ್ಭದಲ್ಲಿ ಶಂಖನಾದಗೊಳಿಸುವುದು, ಹಣ್ಣು, ಬಾಳೆಹಣ್ಣುಗಳನ್ನು ಸಾಗುತ್ತಿರುವ ರಥದ ಮೇಲೆ ಎಸೆಯುವರು ಮತ್ತು ಜೈಘೋಷವನ್ನು ಕೂಗುವರು.

ನಾಡಿನ ನಾನಾ ಕಡೆಗಳಿಂದ ಪಾದಯಾತ್ರೆ ಮೂಲಕ ಅಸಂಖ್ಯಾತ ಭಕ್ತ ಸಮೂಹವೇ ಹರಿದು ಬಂದಿತ್ತು. ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶಗಳಿಂದ ಜಾತ್ರೆಗೆ ಭಕ್ತರು ಆಗಮಿಸುತ್ತಾರೆ(ಪ್ರಜಾವಾಣಿ ಪತ್ರಿಕೆ; ೧೨-೦೩-೨೦೧೨: ಮತ್ತು ಜಗನ್ನಾಥ ೨೦೧೦: ೨೨೦-೨೨೧).

ಳ. ನಂದಾದೀಪ

ಶರಣಬಸವೇಶ್ವರರು ಅನೇಕ ಪವಾಡಗಳನ್ನು ಮಾಡಿದ್ದಾರೆ. ಅರಳಗುಂಡಿಗೆ ಗ್ರಾಮ ತ್ಯಜಿಸಿ ಹೋಗುವಾಗ ಅವರು ಹಚ್ಚಿಟ್ಟು ಹೋದ ನಂದಾದೀಪ(ಅಮರ ಜ್ಯೋತಿ) ಸುಮಾರು ಎರಡು ನೂರು ವರ್ಷಗಳು ಗತಿಸಿದರೂ, ಇಂದಿಗೂ ಈ ದೀಪವು ಒಮ್ಮೆಯೂ ಆರಿರುವುದಿಲ್ಲ. ಅದಕ್ಕಾಗಿಯೇ ಇದು ಶರಣಬಸವರ 'ನಂದಾದೀಪ' ಎಂದು ಕರೆಯುತ್ತಾರೆ (ಸಂಯುಕ್ತ ಕರ್ನಾಟಕ ಪತ್ರಿಕೆ, ೨೨-೦೩-೨೦೧೧: ವಿಶೇಷ ಪುರವಣಿ).

ಅನೇಕ ಶಕ್ತಿ-ಸಾಹಸ ಪ್ರದರ್ಶನಗಳು ಸಾರ್ವಜನಿಕರ ಸಮ್ಮುಖದಲ್ಲಿ ನಡೆಯುತ್ತವೆ. ೧೫೦ ಕೆ.ಜಿ. ಭಾರದ ಜೋಳದ ಚೀಲ ಎತ್ತಿದವರಿಗೆ ೫ ತೊಲಾ ಬೆಳ್ಳಿ ಕಡಗ, ಮಡಿವಾಳಪ್ಪ ಸುಭಾನವರು ಬಕ್ಕತಲೆಯ ಮೇಲೆ ಎತ್ತಿನ ಗಾಡಿಯ ಚಕ್ರವನ್ನು ಹೊತ್ತು ಪ್ರದರ್ಶನ ಮಾಡುತ್ತಾರೆ. ೧೯೮೫ರಲ್ಲಿ ಬಕ್ಕತಲೆಯ ಮೇಲೆ ಚಕ್ಕಡಿ ಗಾಲಿ ಹೊತ್ತು, ಪೂರ್ಣಗ್ರಾಮವನ್ನು ಸುತ್ತು ಹಾಕಿ ಬಹುಮಾನಗಳನ್ನು ಪಡೆದಿರುತ್ತಾರೆ. ಜಾತ್ರೆಯಲ್ಲಿ ಇನ್ನೊಂದು ವಿಶೇಷವೆಂದು ಜಾನುವಾರ ಜಾತ್ರೆ ಜರುಗುತ್ತದೆ. ಈ ಜಾತ್ರೆಗಳಲ್ಲಿ ಹಲವಾರು ವ್ಯಾಪಾರಿಗಳು ಪಾಲ್ಗೊಳ್ಳುತ್ತಾರೆ (ಸಂಯುಕ್ತ ಕರ್ನಾಟಕ, ವಿಶೇಷ ಪುರವಣಿ (೨೨-೦೩.೨೦೧೧:೧).

೩.೪. ಶರಣಬಸವೇಶ್ವರ ಶೈಕ್ಷಣಿಕ ಕೇಂದ್ರಗಳು

ದೇಶದ ಇತರೆ ಕಡೆಗಳಿಂದ ಗುಲಬರ್ಗಾ ಜಿಲ್ಲೆಯಲ್ಲಿಯೂ ಸ್ಥಳೀಯ ಶಿಕ್ಷಣ ಸಂಘ ಸಂಸ್ಥೆಗಳು ಮತ್ತು ಮಠಾಧಿಪತಿಗಳು ಮಾರ್ಗದರ್ಶಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಪ್ರಾಚೀನ ಕಾಲದಲ್ಲಿನ ಅಗ್ರಹಾರ, ಬ್ರಹ್ಮಪುರಿ, ಘಟಿಕಾಸ್ಥಾನ, ದೇವಾಲಯ ಮತ್ತು ಗುರುಕುಲಗಳು ಶಿಕ್ಷಣದ ಮೂಲಕೇಂದ್ರಗಳಾಗಿದ್ದವು ಎಂಬುದು ಜಿಲ್ಲೆಯ ಇತಿಹಾಸ ಮತ್ತು ಶಾಸನಗಳಿಂದ ವಿದಿತವಾಗುತ್ತದೆ. ಪ್ರಾಚೀನ ಕಾಲದಲ್ಲಿ ಸಾಮಾನ್ಯವಾಗಿ ಶಿಕ್ಷಣ ಗುರುವಿನ ಮೂಲಕ ಶಿಷ್ಯನಿಗೆ ಮೌಖಿಕವಾಗಿ ನಡೆಯುತ್ತಿತ್ತು. ಅವುಗಳನ್ನು ಗುರುಕುಲಗಳೆಂದು ಕರೆಯುತ್ತಿದ್ದರು. ಕ್ರಿ.ಪೂ. ೨ನೇ ಶತಮಾನದಲ್ಲಿ ಅಶೋಕನ ಕಾಲದ ಬೌದ್ಧವಿವಾರ, ಜೈನ ಬಸದಿಗಳು, ಕ್ರಮೇಣ ಬೆಳೆದು ಅವು ಮುಂದೆ ಪ್ರಮುಖ ವಿದ್ಯಾಕೇಂದ್ರಗಳಾದವು. ಅಂದಿನ ಕಾಲದ ಅರಸರು ಪ್ರಜೆಗಳಿಗೆ ಧರ್ಮ, ರಾಜಕೀಯ, ಸಾಮಾಜಿಕ ಕಾರ್ಯಗಳನ್ನು ತಿಳಿಸುವ ಉದ್ದೇಶದಿಂದ ಶೈಕ್ಷಣಿಕ ರಂಗಕ್ಕೆ ಹೆಚ್ಚು ಮಹತ್ವ ಕೊಡುತ್ತಿದ್ದರು. ಶಿಕ್ಷಣ ಕೇಂದ್ರಗಳ ನಿರ್ವಹಣೆಗಾಗಿ ಭೂದಾನ ಮತ್ತು ಇತರ ದಾನಗಳನ್ನು ನೀಡಲಾಗುತ್ತಿತ್ತು. ಉಚ್ಚಶಿಕ್ಷಣವು ಸಂಸ್ಕೃತದಲ್ಲಿ, ಪ್ರಾಥಮಿಕ ಶಿಕ್ಷಣವು ಕನ್ನಡದಲ್ಲಿ ಜರುಗುತ್ತಿತ್ತು. ಪ್ರಾಥಮಿಕ ಶಿಕ್ಷಣಕ್ಕೆ ಬಾಲಶಿಕ್ಷೆಯೆಂದು ಕರೆಯುತ್ತಿದ್ದರು. ಅಂದಿನ ಕಾಲದಲ್ಲಿ ಸನ್ನತಿಯು ಬೌದ್ಧರ ಪ್ರಾಚೀನ ವಿದ್ಯಾಕೇಂದ್ರವಾಗಿತ್ತು.

ಕ್ರಿ.ಶ. ೯೪೩ರಲ್ಲಿ ಹೈಹಯ ವಂಶದ ಶಿರಸಿರಸನು ಕಲಬುರ್ಗಿ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನ ನಾಗಾವಿ ವಿಶ್ವವಿದ್ಯಾಲಯಕ್ಕೆ ಬೆಳವಣಿಗೆಯ ಸಲುವಾಗಿ ಭೂಮಿಯನ್ನು ದತ್ತಿ ನೀಡಿದನೆಂದು ಶಾಸನದಿಂದ ತಿಳಿದುಬರುತ್ತದೆ.

ವಾಸಸ್ಥಾನಕ್ಕಾಗಿ, ಘಟಿಕಾಸ್ಥಾನಗಳು ಪ್ರಾಥಮಿಕ ಹಾಗೂ ಪ್ರೌಢ ವಿದ್ಯಾಭ್ಯಾಸ ನಡೆಸುವುದಕ್ಕೆ ಹಾಗೂ ದೇವಸ್ಥಾನಗಳು ಋಷಿಗಳಿಗೆ ಅಧ್ಯಾಪನದ ಕೇಂದ್ರಗಳಾಗಿದ್ದವು. ಅಂದು ವಿದ್ಯಾದಾನ ಎಲ್ಲ ಹಂತಗಳಲ್ಲಿ ಉಚಿತವಾಗಿತ್ತು. ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡವು, ಪ್ರೌಢ ಶಿಕ್ಷಣದಲ್ಲಿ ಸಂಸ್ಕೃತವು ಬೋಧನ ಭಾಷೆಗಳಾಗಿರುತ್ತಿದ್ದವು. ಹೀಗಾಗಿ ಗುಲಬರ್ಗಾ ಜಿಲ್ಲೆಯಲ್ಲಿರುವ ಸುಪ್ರಸಿದ್ಧ ಅಗ್ರಹಾರಗಳೆಂದರೆ ಕುಳಗೇರಿ, ಮುದನೂರು, ಹಗರಟಗಿ, ಗೊಬ್ಬೂರು, ಸುಲೇಪೇಟೆ, ಸೇಡಂ, ಶಿರವಾಳ, ರಟಗಲ್ ಹಾಗೂ ಹರಸೂರು ಮುಂತಾದವು ಪ್ರಮುಖವಾಗಿದ್ದವು. ಗುಲಬರ್ಗಾ ಜಿಲ್ಲೆ ೧೯೧೨ರಲ್ಲಿ ಒಂದು ಶೈಕ್ಷಣಿಕ ವಿಭಾಗೀಯ ಕೇಂದ್ರವಾಗಿತ್ತು. ಮಹಿಳಾ ಶಿಕ್ಷಣ ತೀರಾ ಅಪರೂಪವಾಗಿತ್ತು. ಆಗ ಪರ್ದಾಪದ್ಧತಿ ಜಾರಿಯಲ್ಲಿತ್ತು. ಮಹ್ಮದೀಯ ಅರಸರ ಆಳ್ವಿಕೆಯಲ್ಲಿ ಈ ಭಾಗಕ್ಕೆ ಇಸ್ಲಾಂ ಮಾದರಿಯ ಶಿಕ್ಷಣ ದೊರೆಯಿತು. ೧೮೭೫ರಲ್ಲಿ ಕಲಬುರ್ಗಿಯಲ್ಲಿ ಆಂಗ್ಲ-ದೇಶೀಯ ಮಾಧ್ಯಮಶಾಲೆ ತೆರೆಯಲಾಯಿತು. ಉರ್ದು ಮಾಧ್ಯಮವಿದ್ದು, ಆಂಗ್ಲ ಭಾಷೆ ಒಂದು ವಿಷಯವನ್ನಾಗಿ ಬೋಧಿಸುತ್ತಿದ್ದರು. ಹೀಗಾಗಿ ಆಧುನಿಕ ಶಿಕ್ಷಣ ಕಲಬುರ್ಗಿಯ ಜನತೆಗೆ ಪ್ರಾಥಮಿಕ ಶಾಲೆಗಳ ಮುಖಾಂತರ ಪರಿಚಯವಾಯಿತು(ತಡಕಲ್ ೨೦೦೬: ೨೫-೨೭). ಅಂದಿನ ಕಾಲದಲ್ಲಿ ನಿಜಾಮರ ಆಳ್ವಿಕೆಯಲ್ಲಿ ಉರ್ದು ಅವರ ಆಡಳಿತ ಭಾಷೆಯಾಗಿತ್ತು.

ಓದಿಸುವ ಗುರುವರನ ಮಠಕ್ಕೆ ಮುದದಿಂದ
ಕರೆದೊಯ್ದು ತವ ಶಿಷ್ಯನಿಗೆ ಓದು ಕಲಿಸುವ
ದೆಂದು ಪಾದಕವನತನಾಗಿಸಲ್ಕಂಡು ಮುದವೆಂದು
ನಾದದೊಳಗಖಿಳ ಕಲೆಗೆ.

ಗುರುಲಿಂಗ ಸಿದ್ಧಕವಿಯವರು ಮೇಲಿನ ವಿವರದಲ್ಲಿ ಶರಣಬಸವೇಶ್ವರರ ಮಠದ ಶಿಕ್ಷಣ ವಿಷಯವನ್ನು ಹೇಳಲಾಗಿದೆ. ಮಠ-ಮಾನ್ಯಗಳಲ್ಲಿ ಹಿಂದೂ ಸಂಪ್ರದಾಯದ ಕೆಲವು ಮುಖ್ಯ ಗ್ರಂಥಗಳ ವಾಚನ, ಪಠಣ, ಪಾರಾಯಣಗಳೂ ನಡೆಯುತ್ತಿದ್ದವು. ಮುಸ್ಲಿಮರು ಕುರಾನ್ ಓದುವುದು, ಕೆಲವೊಂದು ಸಂತರ ಹೇಳಿಕೆಗಳನ್ನು ಕಲಿಯುವುದು, ಕರಡು ತಿದ್ದುವುದು ಮಾಡುತ್ತಿದ್ದರು. ಮುಸ್ಲಿಮರ ಆಡಳಿತದಿಂದಾಗಿ ಉರ್ದು ಭಾಷೆಯಲ್ಲಿಯೇ ಶಿಕ್ಷಣವನ್ನು ಹಿಂದೂಗಳಿಗೂ ನೀಡಲಾಗುತ್ತಿತ್ತು. ಬಹಮನಿ ಅರಸರ ಕಾಲದಲ್ಲಿ ಬೀದರ ಮತ್ತು ಅದರ ಸುತ್ತಮುತ್ತಲಿನ ಪ್ರದೇಶದಲ್ಲಿ ಸ್ಥಾಪಿಸಿದ ಕೆಲವು ಶಿಕ್ಷಣ ಕೇಂದ್ರಗಳಲ್ಲಿ ಅರಬ್ಬಿ, ಪರ್ಶಿಯನ್, ಇಸ್ಲಾಮ್, ಕಾನೂನು, ಅಧ್ಯಾತ್ಮ ಶಾಸ್ತ್ರ, ತರ್ಕಶಾಸ್ತ್ರ, ವಿಜ್ಞಾನ ಮುಂತಾದ ವಿಷಯಗಳನ್ನು ಕಲಿಸಲಾಗುತ್ತಿತ್ತು. ಮುಸ್ಲಿಮ ಶಿಕ್ಷಕರನ್ನು ಮೌಲ್ವಿಗಳೆಂದು ಕರೆಯುತ್ತಿದ್ದರು. ಶಾಲೆಗಳು 'ಮುಕ್ತಬ್' ಮತ್ತು 'ಮದರಸಾಹ್'ಗಳೆಂದು ಹೆಸರಾಗಿದ್ದವು(ಹಿರೇಮಠ ೨೦೧೧: ೨೧).

ನಿಜಾಮನ ಕಾಲದಲ್ಲಿ ಆರಂಭವಾಗಿರುವ ಎಂ.ಪಿ.ಎಚ್.ಎಸ್. ಪ್ರೌಢಶಾಲೆ ಜಿಲ್ಲೆಯ ಪ್ರಥಮ ಪ್ರೌಢ ಶಾಲೆಯಾಗಿದೆ. ಮುಂದೆ ಸರಕಾರಿ ಮಾಧ್ಯಮಿಕ ಶಾಲೆಯಲ್ಲಿ ಇಂಟರ್ ಮೀಡಿಯಟ್ ತರಗತಿ ಪ್ರಾರಂಭವಾಯಿತು. ಭಾಲ್ಕಿಯ ಚೆನ್ನಬಸವ ಪಟ್ಟದೇವರು ಹೊರಗೆ ಉರ್ದು ಶಾಲೆಯ ಬೋರ್ಡು ಹಾಕಿ ಒಳಗೆ ಕನ್ನಡ ಕಲಿಸಿದರು.

ಇಪ್ಪತ್ತನೆಯ ಶತಮಾನದ ಪ್ರಾರಂಭದ ವೇಳೆ ಖಾಸಗಿ ಶಿಕ್ಷಣ ಜಾರಿಗೊಂಡಿತು. ಹಲವಾರು ಶಿಕ್ಷಣ ಸಂಸ್ಥೆಗಳು ಇಲ್ಲಿ ಹುಟ್ಟಿಕೊಂಡು ಶೈಕ್ಷಣಿಕ ವಿಕಾಸಕ್ಕೆ ಕಾರಣೀಭೂತವಾಗಿವೆ. ಈ ಭಾಗದಲ್ಲಿ ನೂತನ ವಿದ್ಯಾಲಯ ಸಂಸ್ಥೆ, ಶ್ರೀ ಶರಣಬಸವೇಶ್ವರ ವಿಧ್ಯಾವರ್ಧಕ ಸಂಘ, ಹೈದರಾಬಾದ್ ಕರ್ನಾಟಕ ಶಿಕ್ಷಣ ಸಂಸ್ಥೆ ಇತ್ಯಾದಿ ಸಂಸ್ಥೆಗಳು ಸಾರ್ವತ್ರಿಕ ಶಿಕ್ಷಣ ನೀಡಲು ಕಾರ್ಯಪ್ರವೃತ್ತವಾಗಿವೆ. ಈ ಭಾಗದಲ್ಲಿ ಶೈಕ್ಷಣಿಕ ಕ್ಷೇತ್ರದ ರೂವಾರಿಗಳಾದ ಪೂಜ್ಯ ದೊಡ್ಡಪ್ಪ ಅಪ್ಪ, ಡಿ.ಕೆ. ಭೀಮಸೇನರಾವ್, ತವಗ ಭೀಮಸೇನರಾವ್, ಸಿದ್ಧಯ್ಯ ಪುರಾಣಿಕ, ಅಣ್ಣಾರಾವ ಗಣಮುಖಿ, ಪ್ರಭುರಾವ ಕಂಬಳಿವಾಲೆ, ದಿ. ಮಹಾದೇವಪ್ಪ ರಾಂಪುರೆ, ದಿ. ಚಂದ್ರಶೇಖರ ಪಾಟೀಲ ಮಹಾಗಾಂವ ಮತ್ತು ಶರಣಯ್ಯ ಸ್ವಾಮಿ ಮುಂತಾದವರನ್ನು ಹೆಸರಿಸಬಹುದಾಗಿದೆ (ತಡಕಲ್ ೨೦೦೬: ೨೨೭).

**ಶರಣಬಸವೇಶ್ವರ ವಿದ್ಯಾವರ್ಧಕ ಸಂಘ, ಗುಲಬರ್ಗಾ**

ಶರಣಬಸವೇಶ್ವರ ಮಹಾದಾಸೋಹ ಪೀಠದ ಪೀಠಾಧಿಪತಿಗಳಾದ ಮೂರನೆಯ ಶರಣಬಸಪ್ಪನವರ ಅವಧಿಯಲ್ಲಿ(೧೮೯೭-೧೯೦೩) ಕನ್ನಡ ನಾಡಿನ ನೆಲವಾದ ಗುಲಬರ್ಗಾ ನಗರದಲ್ಲಿ ಶರಣಬಸವೇಶ್ವರ ವಿದ್ಯಾವರ್ಧಕ ಸಂಘ ಅಂಕುರಾರ್ಪಣವಾಯಿತು. ಮಹಾದಾಸೋಹ ಮನೆಯ ಮೇಲಿನ ಮಹಡಿಯಲ್ಲಿ ಕನ್ನಡ ಶಾಲೆ ಆರಂಭಿಸುವುದರ ಮೂಲಕ(೧೯೦೩) ಶರಣಬಸವೇಶ್ವರ ವಿದ್ಯಾವರ್ಧಕ ಸಂಘ ನಾಂದಿ ಹಾಡಿತು. ಆರ್ಯ ಸಮಾಜದ ಅನುಯಾಯಿ ಭಾನು ಪ್ರತಾಪಸಿಂಗ್ ಅವರು ಈ ಶಾಲೆಯ ಪ್ರಥಮ ವರ್ಷದ ವಿದ್ಯಾರ್ಥಿಯಾಗಿದ್ದರು. ಮಹಾದಾಸೋಹ ಪೀಠದ ಏಳನೆಯ ಪೀಠಾಧಿಪತಿಗಳಾಗಿ ಬಂದ ಪೂಜ್ಯ ದೊಡ್ಡಪ ಅಪ್ಪ ಅವರ ಆರಂಭದ ವಿದ್ಯಾಭ್ಯಾಸ ಇಲ್ಲಿಯೇ ನಡೆದಿರುವುದು ಗಮನಾರ್ಹ ಅಂಶವಾಗಿದೆ.

ಕ್ರಿ.ಶ. ೧೯೦೩ರಲ್ಲಿ ಪೀಠಾಧಿಪತಿಗಳಾಗಿ ಬಂದ ಪೂಜ್ಯ ದೊಡ್ಡಪ್ಪ ಅಪ್ಪ ಅವರ ಮಹಾದಾಸೋಹ ಪರಂಪರೆಯ ಸಂವರ್ಧನೆಗೆ ಕಾರಣೀಭೂತರಾದರು. ಇವರ ಕಾಲದಲ್ಲಿ ಮಹಾದಾಸೋಹ ಪೀಠ ಮತ್ತು ಶರಣಬಸವೇಶ್ವರ ವಿದ್ಯಾವರ್ಧಕ ಸಂಘ ಪ್ರವರ್ಧ ಮಾನದೆಡೆಗೆ ಮುಂದುವರೆದಿರುವುದು ಪ್ರಮುಖ ಅಂಶವಾಗಿದೆ. ಮಹಾದಾಸೋಹಿ ಶ್ರೀ ಶರಣಬಸವೇಶ್ವರರು ಅನ್ನದಾಸೋಹಕ್ಕೆ ಭದ್ರಬುನಾದಿ ಹಾಕಿದರೆ, ದೊಡ್ಡಪ್ಪ ಅಪ್ಪ ಅವರು ಜ್ಞಾನದಾಸೋಹವನ್ನು ಆರಂಭಿಸಿ ಶಿಕ್ಷಣ ಕ್ಷೇತ್ರದ ಹರಿಕಾರರೆನಿಸಿದರು. ಜನಸಾಮಾನ್ಯರಲ್ಲಿ ಜನಜಾಗೃತಿ ಮೂಡಿಸಲು ೧೯೧೮ರಲ್ಲಿ ಸಾರ್ವತ್ರಿಕ ಗ್ರಂಥಾಲಯವನ್ನು ಪ್ರಾರಂಭಿಸಿದರು. ಇವರ ಮೂಲ ಉದ್ದೇಶ ಜನರಲ್ಲಿ ರಾಷ್ಟ್ರೀಯಪ್ರಜ್ಞೆ ಮತ್ತು ಜನಜಾಗೃತಿಯನ್ನು ಮೂಡಿಸುವುದೇ ಆಗಿದೆ. ನಾಲ್ಕು ಗೋಡೆಗಳ ಮಧ್ಯೆ ತೊತ್ತಾಗಿ ದುಡಿಯುವ ಅಜ್ಞಾನ, ಅಂಧಕಾರದಲ್ಲಿ ಮುಳುಗುತ್ತಿರುವ ಮಹಿಳೆಯರನ್ನು ಜ್ಞಾನಪಥಕ್ಕೆ ತರಲು ಕ್ರಿ.ಶ. ೧೯೩೪ರಲ್ಲಿ ಮಹಾದೇವಿ ಕನ್ಯಾ ಪ್ರೌಢ ಶಾಲೆಯನ್ನು ಪ್ರಾರಂಭಿಸಿ, ಪೂಜ್ಯ ದೊಡ್ಡಪ್ಪ ಅಪ್ಪ ಅವರು ಸ್ತ್ರೀ ಶಿಕ್ಷಣದ ಹರಿಕಾರರೆನಿಸಿದರು.

ಆಳರಸರ ಅರಾಜಕತೆ, ಅನ್ಯಭಾಷೆಗಳ ಪ್ರಾಬಲ್ಯ, ನಿಜಾಮನ ದೌರ್ಜನ್ಯದ ಸಂದರ್ಭದಲ್ಲಿಯೂ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಯನ್ನು ಉಳಿಸಿ ಬೆಳೆಸುವಲ್ಲಿ ಪೂಜ್ಯ ದೊಡ್ಡಪ್ಪ ಅಪ್ಪ ಅವರ ಕಾರ್ಯ ತುಂಬಾ ಶ್ಲಾಘನೀಯವಾಗಿದೆ. ಈ ಶಿಕ್ಷಣ ಸಂಸ್ಥೆಯ ಉದಯದಿಂದ ಇಲ್ಲಿಯ ಬಡಜನರ ಉದ್ಯೋಗಿಗಳ ಬದುಕಿಗೆ ಆಸರೆಯಾಗಿ ಮತ್ತು ವಿದ್ಯಾರ್ಥಿಗಳ ಮೆದುಳಿಗೆ ಜ್ಞಾನದಾಹ ನೀಗಿಸಲು ಅನುಕೂಲವಾಗಿದೆ.

ಕ್ರಿ.ಶ. ೧೯೧೮ರಲ್ಲಿ ಹೈದರಾಬಾದ್‌ನಲ್ಲಿ ಉಸ್ಮಾನಿಯ ವಿಶ್ವವಿದ್ಯಾಲಯ ಸ್ಥಾಪಿತವಾದರೆ, ಇನ್ನೊಂದೆಡೆಯಲ್ಲಿ ಪೂಜ್ಯ ದೊಡ್ಡಪ್ಪ ಅಪ್ಪ ಅವರು ಕನ್ನಡ ಶಿಕ್ಷಣ ನೀಡುತ್ತಿದ್ದ ತಮ್ಮ ಶಿಕ್ಷಣ ಸಂಸ್ಥೆಗೆ ನೋಂದಣಿ ಮಾಡಿ ಜ್ಞಾನದಾಸೋಹಕ್ಕೆ ಅಸ್ತಿಭಾರ ಹಾಕಿದರು. ಪೂಜ್ಯ ಅಪ್ಪ ಅವರು ದೇಶಿ ಹಿನ್ನೆಲೆಯಲ್ಲಿ ಬ್ರಿಟಿಷ್ ಮತ್ತು ನಿಜಾಮರು ತಮ್ಮ ಕೆಲಸಗಾರರಿಗೆ ಕೊಡುತ್ತಿರುವ ರಜೆಯ ದಿನವನ್ನು ಹೊರತುಪಡಿಸಿ, ರೈತಾಪಿ ಜನರ ರಜೆಯಾದ ಸೋಮವಾರವನ್ನು ತಮ್ಮ ಸಂಸ್ಥೆಗಳಿಗೆ ರಜೆಯೆಂದು ಘೋಷಿಸಿದರು. ಕ್ರಿ.ಶ. ೧೯೧೮ರಲ್ಲಿ ಎಲ್ಲಾ ವಿದ್ಯಾಸಂಸ್ಥೆಗಳಿಗೆ ಸೋಮವಾರದ ರಜೆ ನೀಡಿ ಕೃಷಿ ವೃತ್ತಿಯ ಹಿರಿಮೆ ಗರಿಮೆಯನ್ನು ಹೆಚ್ಚಿಸಿರುವರು (ತಡಕಲ್ ೨೦೦೬: ೨೩೨-೨೩೩).

ಅವರು ಸ್ಥಾಪಿಸಿದಂತಹ ಶೈಕ್ಷಣಿಕ ಕೇಂದ್ರಗಳು ಈ ಕೆಳಗಿನಂತಿವೆ.

೧. ೧೯೧೮- ಶರಣಬಸವೇಶ್ವರ ಸಾರ್ವಜನಿಕ ಗ್ರಂಥಾಲಯ, ಗುಲಬರ್ಗಾ
೨. ೧೯೩೪- ಮಹಾದೇವಿ ಕನ್ಯಾ ಪ್ರೌಢಶಾಲೆ, ಗುಲಬರ್ಗಾ
೩. ೧೯೪೯- ಶರಣಬಸವೇಶ್ವರ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯ
೪. ೧೯೫೬- ಶರಣಬಸವೇಶ್ವರ ವಿಜ್ಞಾನ ಮಹಾವಿದ್ಯಾಲಯ, ಗುಲಬರ್ಗಾ
೫. ೧೯೫೭- ಶರಣಬಸವೇಶ್ವರ ಕಲಾ ಮಹಾವಿದ್ಯಾಲಯ(ಸ್ನಾತಕೋತ್ತರ ದೃಶ್ಯ ಕಲಾ
೬. ೧೯೬೧- ಮಹಾದೇವಿ ಕನ್ಯಾ ಪ್ರೌಢಶಾಲೆ
೭. ೧೯೬೧- ಶರಣಬಸವೇಶ್ವರ ವಾಣಿಜ್ಯ ಮಹಾವಿದ್ಯಾಲಯ
೮. ೧೯೬೩- ಅಖಿಲಭಾರತ ಅನುಭವ ಮಂಟಪ
೯. ೧೯೬೭- ಶರಣಬಸವೇಶ್ವರ ಪಬ್ಲಿಕ್ ಸ್ಕೂಲ್
೧೦. ೧೯೬೭- ಎಸ್.ಎಸ್. ಖಾಬಾ ಬಸವೇಶ್ವರ ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ, ಬಸವಕಲ್ಯಾಣ ತಾಲೂಕು
೧೧. ೧೯೬೯- ದೊಡ್ಡಪ್ಪ ಅಪ್ಪ ಐ.ಎ.ಎಸ್. ತರಬೇತಿ ಕೇಂದ್ರ, ಗುಲಬರ್ಗಾ
೧೨. ೧೯೬೯- ಶರಣಬಸವೇಶ್ವರ ಮುದ್ರಣಾಲಯ, ಗುಲಬರ್ಗಾ
೧೩. ೧೯೭೧- ಗೋದುತಾಯಿ ದೊಡ್ಡ ಅಪ್ಪ ಪದವಿ ಪೂರ್ವ ಮಹಿಳಾ ಮಹಾವಿದ್ಯಾಲಯ, ಗುಲಬರ್ಗಾ
೧೪. ೧೯೭೧- ಗೋದುತಾಯಿ ದೊಡ್ಡಪ್ಪ ಅಪ್ಪ ಪದವಿ ಪೂರ್ವ ಮಹಿಳಾ ಕಲಾ, ವಾಣಿಜ್ಯ ಮತ್ತು ವಿಜ್ಞಾನ ಮಹಾವಿದ್ಯಾಲಯ, ಗುಲಬರ್ಗಾ
೧೫. ೧೯೭೧- ಶರಣಬಸವೇಶ್ವರ ಗ್ರಂಥಾಲಯ
೧೬. ೧೯೮೦- ಶರಣಬಸವೇಶ್ವರ ಪ್ರಾಥಮಿಕ ಶಾಲೆ, ಗುಲಬರ್ಗಾ
೧೭. ೧೯೮೩- ಶರಣಬಸವೇಶ್ವರ ಚಿತ್ರಕಲೆ

೧೮. ೧೯೯೧- ಶರಣಬಸವೇಶ್ವರ ಪಿ.ಜಿ.ಡಿ.ಸಿ.ಎ. ಕೋರ್ಸ್, ಗುಲಬರ್ಗಾ

೧೯. ೧೯೯೩- ಶರಣಬಸವೇಶ್ವರ ವಸತಿ ಪದವಿ.ಪೂರ್ವ ಮಹಾವಿದ್ಯಾಲಯ, ಗುಲಬರ್ಗಾ

೨೦. ೧೯೯೬- ಶರಣಬಸವೇಶ್ವರ ಕಾಲೇಜ್ ಆಫ್ ಬಿಜಿನೆಸ್ ಮ್ಯಾನೇಜ್‌ಮೆಂಟ್, ಗುಲಬರ್ಗಾ

೨೧. ೧೯೯೮- ದೊಡ್ಡಪ್ಪ ಅಪ್ಪ ಇನ್ಸ್‌ಟಿಟ್ಯೂಟ್ (MBA), ಗುಲಬರ್ಗಾ

೨೨. ೧೯೯೯- ದೊಡ್ಡಪ್ಪ ಅಪ್ಪ ಇನ್ಸ್‌ಟಿಟ್ಯೂಟ್ (MBA), ಗುಲಬರ್ಗಾ

೨೩. ೧೯೯೯- ದೊಡ್ಡಪ್ಪ ಅಪ್ಪ ಸ್ವತಂತ್ರ ವಿಜ್ಞಾನ ಪದವಿಪೂರ್ವ ಮಹಾವಿದ್ಯಾಲಯ, ಗುಲಬರ್ಗಾ

೨೪. ೧೯೯೯- ಮುಕ್ತಾಂಬಿಕಾ ವಿಜ್ಞಾನ ಪದವಿಪೂರ್ವ ಮಹಿಳಾ ಮಹಾವಿದ್ಯಾಯ, ಗುಲಬರ್ಗಾ

೨೫. ೨೦೦೧- ಬಿ.ಸಿ.ಎ. ಕಾಲೇಜ್, ಗುಲಬರ್ಗಾ

೨೬. ೨೦೦೧- ದೊಡ್ಡಪ್ಪ ಅಪ್ಪ ಕಾಲೇಜ್ ಫಾರ್ ಬಿ.ಸಿ.ಎ, ಕಲ್ಯಾಣ

೨೭. ೨೦೦೧- ಶರಣಬಸವೇಶ್ವರ ಬಿ.ಸಿ.ಎ. ಕಾಲೇಜ್, ಗುಲಬರ್ಗಾ

೨೮. ೨೦೦೨- ಅಪ್ಪ ಇನ್ಸಿಟಿಟ್ಯೂಟ್ ಆಫ್ ಇಂಜಿನಿಯರಿಂಗ್ ಮತ್ತು ಟೆಕ್ನಾಲಜಿ

೨೯. ೧೯೭೯- ವಾಣಿಜ್ಯ ಕಲೆ ಮತ್ತು ಚಿತ್ರಕಲೆ, ಗುಲಬರ್ಗಾ

೩೦. ೧೯೭೯- ಕ್ಲಾಥಿಂಗ್ ಮತ್ತು ಎಂಬ್ರಾಯ್ಡರಿ ಕೋರ್ಸ್, ಗುಲಬರ್ಗಾ

೩೧. ೧೯೯೩- ಕಂಪ್ಯೂಟರ್ ಟೆಕ್ನಿಕ್ ಕೋರ್ಸ್, ಗುಲಬರ್ಗಾ

೩೨. ೧೯೭೯- ಪ್ರಿಂಟಿಂಗ್ ಮತ್ತು ಬುಕ್ ಬೈಂಡಿಂಗ್ ಕೋರ್ಸ್, ಗುಲಬರ್ಗಾ

೩೩. ೧೯೮೯- ರೇಡಿಯೋ ಮತ್ತು ಟಿ.ವಿ. ಸರ್ವಿಸ್ ಕೋರ್ಸ್, ಗುಲಬರ್ಗಾ

೩೪. ೧೯೮೯- ಆಟೋಮೊಬೈಲ್ ಕೋರ್ಸ್, ಬಸವಕಲ್ಯಾಣ

೩೫. ೧೯೭೯- ಎಲೆಕ್ಟ್ರಿಕಲ್ ವೈರಿಂಗ್ ಮತ್ತು ಸರ್ವಿಸ್ ಎಲೆಕ್ಟ್ರಿಕಲ್ ಅಪ್ಲಯೆನ್ಸಸ್, ಬಸವಕಲ್ಯಾಣ

೩೬. ೨೦೦೪- ಶರಣಬಸವೇಶ್ವರ ಪದವಿಪೂರ್ವ ವಿಜ್ಞಾನ ಮಹಾವಿದ್ಯಾಲಯ

೩೭. ೨೦೦೪- ಶರಣಬಸವೇಶ್ವರ ಶಿಕ್ಷಣ ಮಹಾವಿದ್ಯಾಲಯ

೩೮. ೨೦೦೪- ಇನ್ಸಿಟಿಟ್ಯೂಟ್ ಆಫ್ ಅಡ್ವಾನ್ಸ್ ಸ್ಟಡೀಸ್

೩೯. ೨೦೦೪- ಮಹಿಳಾ ವಸತಿ ನಿಲಯ

೪೦. ೨೦೦೪- ಹುಡುಗರ ವಸತಿ ನಿಲಯ

ಇವುಗಳಲ್ಲದೆ ಇನ್ನೂ ಕರ್ನಾಟಕದಾದ್ಯಂತ ತಮ್ಮ ಶಿಕ್ಷಣ ಸಂಸ್ಥೆಯನ್ನು ವಿಸ್ತರಿಸಿದ್ದಾರೆ (ಹೇಕೂರ್ ೨೦೦೫: ೩೮೭-೩೮೯).

### ೩.೬. ಉಪಸಂಹಾರ

ಹೈದರಾಬಾದ್ ಕರ್ನಾಟಕ ಪ್ರದೇಶಗಳಲ್ಲಿಯೇ ಅತ್ಯಂತ ಹೆಸರುವಾಸಿಯಾದ ಜಿಲ್ಲೆ ಗುಲಬರ್ಗಾ ಈ ಭಾಗದಲ್ಲಿ ಅನೇಕ ಸಮಸ್ಯೆಗಳ ನಡುವೆಯೂ ಧಾರ್ಮಿಕವಾಗಿ ತನ್ನದೆಯಾದ ಆಚಾರ-ವಿಚಾರಗಳನ್ನು ಮೈಗೂಡಿಸಿಕೊಂಡು ಬಹುಸಂಖ್ಯಾತ ಹಿಂದೂಗಳೊಂದಿಗೆ ಅಲ್ಪಸಂಖ್ಯಾತ ಇಸ್ಲಾಂ ಧರ್ಮದ ಜನರು ಐಕ್ಯತೆಯಿಂದ ಕೂಡಿಕೊಂಡು ಸಾಮರಸ್ಯದ ಜೀವನ ಮಾಡುತ್ತಿರುವದು ಕಾಣುತ್ತೇವೆ.

### ಟಿಪ್ಪಣಿಗಳು

೧. ಶರಣಬಸವೇಶ್ವರರು ಜೇವರ್ಗಿ ತಾಲೂಕಿನ ಅರಳುಗುಂಡಿಗಿ ಗ್ರಾಮದಲ್ಲಿ ಜನಿಸಿದರು. ಅರಳು ಎಂದರೆ ಪುಷ್ಪ ಅಥವಾ ಹೂ. ಗುಂಡಿಗೆ ಎಂದರೆ ಕರಡಿಗೆ ಎಂದು ಅದಕ್ಕಾಗಿಯೇ ಇದನ್ನು ಪುಷ್ಪಕರಡಿಗೆ ಎಂದು ಕರೆಯುತ್ತಿದ್ದರು. ಮತ್ತು ಇವರು ಸಾಲೋಕ್ಯ ಮನೆತನದವರು ಎಂದು ಜನವದಂತಿ.

೨. ಶರಣಬಸವೇಶ್ವರರ ವಂಶವೃಕ್ಷ ಮಾಹಿತಿಯ ಪ್ರಕಾರ ಈ ಮನೆತದ ಮೂಲ ವ್ಯಕ್ತಿ ನಿಂಗಪ್ಪ.

ಶರಣಬಸವೇಶ್ವರ ಜೀವಿತಾವಧಿಯ ಕಾಲದ ಬಗೆಗೆ ಭಿನ್ನಾಭಿಪ್ರಾಯಗಳು ಕಂಡುಬರುವುದು ಕಡಿಮೆ. ಹಲವಾರು ಸಾಹಿತಿಗಳು, ಸಿದ್ದಯ್ಯ ಪುರಾಣಿಕ, ಚೆನ್ನಬಸವಯ್ಯ ನಂದೀಮಠ, ಶ್ರೀ ಜಯಚಾಮರಾಜೇಂದ್ರ ಒಡೆಯರು, ಎಲ್ ಬಸವರಾಜು ಮುಂತಾದವರು ಶರಣಬಸವೇಶ್ವರರ ಕಾಲವನ್ನು ಕ್ರಿ.ಶ. ೧೭೪೬ರಿಂದ ೧೮೨೨ ಎಂದೇ ಖಚಿತಪಡಿಸಿದ್ದು ಗಮನಾರ್ಹವಾದುದು. 'ಶರಣಬಸವೇಶ್ವರ ತಾರಾವಳಿ'ಯ ಕರ್ತೃ ಹೊನ್ನಕಿರಣಗಿಯ ಮಠ ಕರಿಬಸವಸ್ವಾಮಿ ಇದರಲ್ಲಿ ಉಲ್ಲೆಖಿಸಿದ್ದಾರೆ.

೩. ಶರಣಬಸವೇಶ್ವರರ ಮನೆತನದ ಗುರುಗಳು ಕಲಕೇರಿ ಪೀಠಾಧಿಪತಿಗಳಾದ ಮರುಳುಸಿದ್ದರು. ಶರಣಬಸವೇಶ್ವರರು ವಿದ್ಯಾಭ್ಯಾಸ ಪಡೆದಿದ್ದು ಚರಂತಿ ಸ್ವಾಮಿ ಎಂಬುವರಿಂದ.

೪. ಶರಣಬಸವೇಶ್ವರರ ವೈವಾಹಿಕ ಸಂಬಂಧಗಳು: ಮೊದಲನೇ ಹೆಂಡತಿ ಮಹಾದೇವಮ್ಮ ಮತ್ತು ಎರಡನೇ ಹೆಂಡತಿ ಚೆನ್ನಬಸಮ್ಮ. ಈ ಇರ್ವರ ಹೆಸರಿನಲ್ಲಿ ಭಕ್ತರು 'ಆಯಿಗುಡಿ' ಎಂದು ದೇವಾಲಯ ಅರಳಗುಂಡಿಗೆಯಲ್ಲಿಯೇ ನಿರ್ಮಿಸಿಕೊಂಡು ಇಂದಿಗೂ ಪೂಜಿಸುತ್ತಿದ್ದರು.

೫. ಶರಣಬಸವೇಶ್ವರರು ಮೂಲವೃತ್ತಿ ಕೃಷಿಯಾಗಿತ್ತು. ಅವರ ಹೊಲದ ಮೂಲೆಗಳಲ್ಲಿ ನೀರಿನ ತೊಟ್ಟಿಗಳನ್ನು(ರಂಜಣಿಗಿ)ಗಳ ಹೂತು ಪ್ರಾಣಿ ಪಕ್ಷಿಗಳಿಗೆ ನೀರಿನ ವ್ಯವಸ್ಥೆ ಮಾಡುವುದರ ಮೂಲಕ ಅವುಗಳ ದಾಹವನ್ನು ನೀಗಿಸುತ್ತಿದ್ದರು. ಇಂದಿಗೂ ಅರಳಗುಂಡಿಗೆಯಲ್ಲಿ ಆ ಹೊಲಗಳು 'ದಾಸೋಹ ಹೊಲ' ಎಂದೇ ಪರಿಚಿತಗೊಂಡಿದೆ. ಅವರ ಹೊಲದ ಕುರಿತು ಸಾಹಿತಿಗಳಾದ ಎಲ್ ಬಸವರಾಜು ಅವರು ಕೊಂಡಾಡಿದ್ದರು.

ಪತ್ರಿವನ ಮಾಹಿತಿ, ಪತ್ರಿವನವು ಅರಳಗುಂಡಿಗೆಯಿಂದ ಪೂರ್ವಕ್ಕೆ ೪ ಕಿ.ಮೀ. ಅಂತರದಲ್ಲಿದೆ. ಇದಕ್ಕೆ ಹಿಪ್ಪರಿಗೆ ಪತ್ರಿವನ ಎಂದು ಹೆಸರು ಬರಲು ಕಾರಣವಾದ ಅಂಶಗಳು ಕುರಿತು ಚರ್ಚಿಸಲಾಗಿದೆ.

೬. ಕಲ್ಲಪ್ಪ ಶ್ರೀಗಿರಿಯ ಗುಮಾಸ್ತನಾಗಿದ ರಾಮಜೀದಾದನು ಶರಣಬಸವೇಶ್ವರನ ಅಧ್ಯಾತ್ಮದ ಜ್ಞಾನಕ್ಕೆ ಸೋತು ಆತನ ಶಿಷ್ಯತ್ವವನ್ನು ಪಡೆದುಕೊಂಡನು.

೭. ಮತೀಯ ಸಮಸ್ಯೆಯಿಂದ ಶರಣಬಸವೇಶ್ವರರು ಅರಳಗುಂಡಿಗೆಯನ್ನು ತ್ಯಜಿಸಲು ಒದಗಿಬಂದ ಪ್ರಸಂಗಗಳನ್ನು ಹಿರೇಮಠ ಅವರು ವಿವರಿಸಿದ್ದಾರೆ ಮತ್ತು ಕಲ್ಯಾಣ ಮಾರ್ಗವಾಗಿ ಪ್ರಯಾಣ ಬೆಳೆಸಲು ಅವರ ಮಾರ್ಗ ಮಧ್ಯ ನೆಲೆ ನಿಂತ ಕಡೆಗಳಲ್ಲೆಲ್ಲ ಸ್ಮಾರಕ ನಿರ್ಮಾಣವಾದ ಬಗೆ ಕುರಿತು ಚರ್ಚೆ.

೮. ಶರಣಬಸವೇಶ್ವರರು ಆದಿದೊಡ್ಡಪ್ಪಗೌಡರ ಮನೆಯ ಮಗನಾಗಿ ಲಿಂಗೈಕ್ಯರಾದ ಪ್ರಸಂಗ ತರುವಾಯ ಅವರ ಹೆಸರಿನಲ್ಲಿ ದೇವಾಲಯವನ್ನು ನಿರ್ಮಿಸಿ ದಾಸೋಹವನ್ನು ದೊಡ್ಡಪ್ಪ ಶರಣರು ನಡೆಸಿಕೊಂಡು ಬಂದುದು ಮತ್ತು ಇವತ್ತಿಗೂ ಮುಂದುವರೆದಿದೆ. ಶರಣಬಸವೇಶ್ವರ ದೇವಾಲಯದ ಎದುರುಗಡೆ ಆದಿ ದೊಡ್ಡಪ್ಪ ಶರಣರ ಸಮಾಧಿ ಇದೆ.

೯. ಹಿಂದೂ-ಮುಸ್ಲಿಂ ಸೌಹಾರ್ದತೆಯ ಕುರುಹುಗಳೆಂಬಂತೆ ಗುಲಬರ್ಗಾದಲ್ಲಿ ಶರಣಬಸವೇಶ್ವರ ಮತ್ತು ಖಾಜಾ ಬಂದೇನವಾಜ್‌ರ ನಡುವಿನ ಗೆಳೆತನದ ಕುರಿತು ಒಂದು ಪ್ರಸಂಗದ ವಿವರಣೆಯನ್ನು ನೀಡಲು ಪ್ರಯತ್ನಿಸಲಾಗಿದೆ.

೧೦. ಶರಣಬಸವೇಶ್ವರರು ಸುಲೆಪೇಟೆ ಖಟ್ಯಾಂಗೇಶ್ವರ ಮಠದ ಮೇಲೆ ನಿಜಾಮ ಸೈನ್ಯದ ಬೇದಾಡೆ ಪಡೆಯ ಸೈನಿಕನಿಗೆ ಉಪದೇಶಿಸಿ ಪರಿವರ್ತನೆಗೊಳಿಸಿದ ಮಾಹಿತಿ ನೀಡಲಾಗಿದೆ.

೧೧. ಗುರು-ಶಿಷ್ಯರ ಬಾಂಧವ್ಯದ ಪ್ರತೀಕವೆಂಬಂತೆ ಶರಣಬಸವೇಶ್ವರ ಗದ್ದುಗೆಯ ಮೇಲೆ ಒಂದೇ ರೂಪದ ಎರಡು ಮೂರ್ತಿಗಳ ಸ್ಥಾಪನೆ.

೧೨. ಶರಣಬಸವೇಶ್ವರ ಸಮಕಾಲೀನ ನಿಜಾಮ ದೊರೆಗಳ ವಿವರಣೆ ನೀಡಲಾಗಿದೆ.

೧೩. ನಿಜಾಮ ಆಳ್ವಿಕೆಗೆ ಒಳಪಟ್ಟಿದ್ದಾಗ ಆರ್ಥಿಕವಾಗಿ ಗುಲಬರ್ಗಾವು ಕ್ಷೀಣಿಸಿತ್ತು ಎಂದು ಹೇಳಬಹುದು.

೧೪. ಶರಣಬಸವೇಶ್ವರ ಜಾತ್ರೆಯಲ್ಲಿನ ಸಾಂಪ್ರದಾಯಿಕ ವಿಧಿ-ವಿಧಾನಗಳನ್ನು ವಿವರಿಸಲು ಪ್ರಜಾವಾಣಿ ಪತ್ರಿಕೆ ಮಾಹಿತಿಯನ್ನು ಕಲೆಹಾಕಲಾಗಿದೆ. ಉಚ್ಚ್ಯಾಯ ಅಥವಾ ಚಿಕ್ಕ ತೇರು ಮುಖ್ಯ ರಥೋತ್ಸವದ ಪೂರ್ವದಲ್ಲಿ ನಡೆಯುವುದು.

೧೫. ಪಲ್ಲಕ್ಕಿ ಉತ್ಸವವು ನಗರದ ಪ್ರಮುಖ ಬೀದಿಗಳಿಂದ ಸಾಗುವ ಸಮಯಕ್ಕೆ ಜರಗುವ ವಿಧಿ-ವಿಧಾನಗಳ ಮಾಹಿತಿ ಸಂಗ್ರಹಣೆಗೆ ಚಪ್ಪರ್‌ಬಂದ್ ಅವರ ಕೃತಿಯನ್ನು ಬಳಸಿಕೊಳ್ಳಲಾಗಿದೆ.

೧೬. ಶರಣಬಸವೇಶ್ವರ ಮುಖ್ಯ ರಥೋತ್ಸವದಂದು ಪರಷು ಬಟ್ಟಲು ಎಂಬ ವಸ್ತುವಿಗೆ ಅಧಿಕವಾಗಿ ಮಾನ್ಯತೆ ಪಡೆದುಕೊಂಡಿದೆ. ಅದರ ವಿವರಣೆಯನ್ನು ನೀಡಲು ಪ್ರಯತ್ನಿಸಲಾಗಿದೆ.

೧೭. ನಂದಾದೀಪವೆಂದರೆ ಶರಣಬಸವೇಶ್ವರರು ಅರಳಗುಂಡಿಗೆ ತ್ಯಜಿಸಿ ಬರುವಾಗ ಹಚ್ಚಿಟ್ಟ ದೀಪವಾಗಿದೆ. ಅದು ಸುಮಾರು ಎರಡು ನೂರು ವರ್ಷಗಳು ಗತಿಸಿದರೂ ಆರಿರುವುದಿಲ್ಲ ಅದಕ್ಕೆ ಶರಣಬಸವೇಶ್ವರರ ನಂದಾದೀಪ ಎಂದು ಕರೆಯುವರು. ಸಂಯುಕ್ತ ಕರ್ನಾಟಕ ದಿನ ಪತ್ರಿಕೆಯಿಂದ ಮಾಹಿತಿಯನ್ನು ತೆಗೆದುಕೊಂಡಿದೆ.

೧೮. ಜಾತ್ರೆಯ ಸಂದರ್ಭದಲ್ಲಿ ಹಲವಾರು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತದೆ.

೧೯. ಹೈದರಾಬಾದ್ ಕರ್ನಾಟಕದಲ್ಲಿ ಅದು ವಿಶೇಷವಾಗಿ ಗುಲಬರ್ಗಾದ ಪ್ರದೇಶದಲ್ಲಿ ಆಂಗ್ಲ ಮಾಧ್ಯಮ ಶಾಲೆಯ ಸ್ಥಾಪನೆ ಹಾಗೂ ಇತರ ಶಿಕ್ಷಣ ಸಂಸ್ಥೆಗಳ ಮಾಹಿತಿಯನ್ನು (ತಡಕಲ್; ೨೦೦೬; ೨೫,೨೭) ಪಡೆದುಕೊಂಡಿದೆ.

೨೦. ಬಹಮನಿಯ ಸಾಮ್ರಾಜ್ಯದ ಆಳ್ವಿಕೆಯಲ್ಲಿ ಮುಕ್ತಬ್ ಮತ್ತು ಮದರಸಾಹ್‌ಗಳ ನಿರ್ಮಾಣದ ಮಾಹಿತಿಯು ಈ ಪ್ರದೇಶಕ್ಕೆ ಸಂಬಂಧಿಸಿದಂತೆ ಸಿಗುತ್ತದೆ (ಹಿರೇಮಠ; ೨೦೧೦).

೨೧. ನಿಜಾಮನ ಕಾಲದ ಪ್ರಥಮ ಎಂ.ಪಿ.ಎಚ್.ಎಸ್ ಪ್ರೌಢಶಾಲೆಯು ಜಿಲ್ಲೆಯಲ್ಲಿಯೇ ಮೊದಲಿಗೆ ಸ್ಥಾಪನೆಗೊಂಡಿತು.

೨೨. ಶರಣಬಸವೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ ಪ್ರಮುಖವಾದ ಅಂಶವೆಂದರೆ ಸರ್ಕಾರಿ ರಜೆಯು ಭಾನುವಾರವಿದ್ದರೂ ಈ ಸಂಸ್ಥಾನದಲ್ಲಿ ಸೋಮವಾರ ರಜೆ ಇರುವುದು.

೨೩. ಶೈಕ್ಷಣಿಕ ಕೇಂದ್ರಗಳ ವಿವರಣೆ ಪಡೆದುದು.

* * *

# ಅಧ್ಯಾಯ ನಾಲ್ಕು

## ಉರುಸು ಮತ್ತು ಜಾತ್ರೆ : ಸಾಂಸ್ಕೃತಿಕ ಆಯಾಮಗಳು

೪.೧. ಪೀಠಿಕೆ

೪.೨ ಸಂಘರ್ಷಗಳು

೪.೩ ಸಾಮರಸ್ಯ

೪.೪. ಉಪಸಂಹಾರ

೪.೧. ಪೀಠಿಕೆ

ಯಾವುದೇ ಉರುಸ್ ಮತ್ತು ಜಾತ್ರೆಗಳಲ್ಲಿ ಎಲ್ಲ ಜಾತಿಗಳ ಜನ ಭಾಗವಹಿಸುವುದು ನಿಜವಾದರೂ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ 'ಕೆಳ' ಹಂತದ ಜನ ಪ್ರಧಾನವಾಗಿರುವುದು ಸ್ಪಷ್ಟ. ದರ್ಗಾಗಳಿಗೂ ಮತ್ತು ದೇವಾಲಯಗಳಿಗೂ ಜನ ನಡೆದುಕೊಳ್ಳುವುದಕ್ಕೂ ಅವರ ಸ್ಥಿತಿಗತಿಗಳಿಗೂ ನೇರ ಸಂಬಂಧವಿದೆ. ಸೂಫಿ ಅನುಭಾವವು ಬಡತನವನ್ನು ಗೌರವಿಸುತ್ತಿತ್ತು. ದೀಕ್ಷೆ ಕೊಡುವಾಗ ಜಾತಿ ಮತಗಳನ್ನು ಕೆಲವೊಮ್ಮೆ ನಿರಾಕರಿಸುತ್ತಿತ್ತು.

ಸೂಫಿಗಳು ಭಾರತದಲ್ಲಿ ಕಾಣಿಸಿಕೊಂಡ ನಂತರ ಪ್ರಮುಖ ಧರ್ಮದ ಅನುಯಾಯಿಗಳೆಲ್ಲಾ ಮತ್ತು ಭಕ್ತ ಸಮೂಹವು ಸೂಫಿ ಸಂತರ ಚಲನವಲನಗಳು ಅವರ ನಡವಳಿಕೆಗಳು ಅವರ ಪವಾಡಗಳು ಅವರ ಆಚಾರ-ವಿಚಾರಗಳು ಉಡುಗೆ ತೊಡುಗೆಗಳ ಮೇಲೆ ಹೆಚ್ಚು ಹೆಚ್ಚಾಗಿ ಆಸಕ್ತಿ ವಹಿಸತೊಡಗಿದರು. ಸೂಫಿಗಳು ಜ್ಞಾನ, ಧ್ಯಾನ, ಭಕ್ತಿ, ಹಠ, ಮೌನ, ಮನಶ್ಯಾಂತಿ, ವೀರ, ಕ್ರೋಧದಲ್ಲಿ ಮೈ ಮರೆಯುತ್ತಾ ಯಾರಿಗೂ ತಿಳಿಯದಂತಹ ನಡೆ, ನುಡಿ ಗೌಪ್ಯವಾಗಿ ಇಟ್ಟುಕೊಂಡು, ಜನರ ನಡುವೆ ಸ್ನೇಹ ಸಲಿಗೆ ಸಾಂಗತ್ಯಕ್ಕೆ ಆದ್ಯತೆಯನ್ನು ಕೊಡುತ್ತಾ ಬಂದರು.

ಎರಡು ಪ್ರಮುಖ ಧರ್ಮಗಳು ಏಕಕಾಲದಲ್ಲಿ ಸ್ಪಂದಿಸುವ ಸ್ಥಳಗಳಲ್ಲಿ ಜನಾಂಗೀಯ ಘರ್ಷಣೆಗಳು ಸಂಭವಿಸುವುದು ಸಹಜ. ಅಲ್ಲಿ ಪ್ರತ್ಯೇಕತೆಯನ್ನು ಹೊಂದಿರುವ ಹಿಂದೂ ಹಾಗೂ ಮುಸ್ಲಿಂ ಧರ್ಮ ಅವುಗಳ ಅನುಯಾಯಿಗಳ ಕ್ಷುಲ್ಲಕ ಕಾರಣಗಳಿಂದ ಅನೇಕ ರಕ್ತಪಾತ ಕೊಲೆಗಳೇ ನಡೆದು ಹೋಗಿರುವ ಘಟನೆಗಳು ನಮ್ಮ ಸ್ವಾತಂತ್ರ್ಯದ ನಂತರ ದಿನಗಳಲ್ಲಿ ನೋಡಿದ್ದೇವೆ ಹಾಗೂ ಈಗಲೂ ಜರುಗುತ್ತಲಿವೆ. ಆದರೆ ಧರ್ಮ ಸಹಿಷ್ಣುತೆಯ ಮೂಲ ರೂಪವೆನಿಸಿದ ಸೂಫಿ ಎಂಬ ಪಂಥವು ಮತ್ತು ಅದರ ಸಾಧಕ ಸಂತರು ಧಾರ್ಮಿಕವಾಗಿ ಮತ್ತು ವೈಯಕ್ತಿಕವಾಗಿ ಸಮ್ಮಿಲನಗೊಂಡಿದ್ದರಿಂದ ಆ ಸ್ಥಳಗಳಲ್ಲಿ ಗಲಭೆಗಳು ಕಾಣಸಿಗುವುದಿಲ್ಲ. ಕಾರಣ ಇಲ್ಲಿ ಎರಡು ಪ್ರಮುಖ ಅಂಶಗಳಾದ ಧಾರ್ಮಿಕ ಸಮ್ಮಿಲನ ಮತ್ತು ವೈಯಕ್ತಿಕ ಸಮ್ಮಿಲನಗಳ ಧಾರ್ಮಿಕ ಗಲಭೆಗಳಿಗೆ ಆಸ್ಪದ ಕೊಡುವುದಿಲ್ಲ. ಹೀಗೆ ಹಿಂದೂ ಸಾಧಕರು ಮತ್ತು ಇಸ್ಲಾಂ ಸಾಧಕರು ಎರಡು ಧರ್ಮಗಳನ್ನು ಒಂದೇ ಎಂಬ ಪರಿಕಲ್ಪನೆಯನ್ನು ಬೀರಿ ಎರಡು ಧರ್ಮಗಳ ಸಂಘರ್ಷಗಳಿಗೆ ನಾಂದಿ ಹಾಡಿವೆ. ಮಾನವನು ಎಲ್ಲಾ ಧರ್ಮಗಳನ್ನು ಗೌರವಿಸಬೇಕು ಯಾವ ಧರ್ಮ ಮೇಲಲ್ಲ ಮತ್ತು ಯಾವ ಧರ್ಮ ಕೀಳಲ್ಲ ಎಂದು ಅನೇಕ ಮಹಾಪುರುಷರು ಕಾಲಕಾಲಕ್ಕೆ ಹೇಳುತ್ತಲೇ ಬಂದಿದ್ದಾರೆ.

ಪ್ರಸ್ತುತ ಅಧ್ಯಾಯದ ಮೊದಲನೆಯ ಭಾಗದಲ್ಲಿ ಸಂಘರ್ಷಗಳು ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದಂತೆ ಗುಲಬರ್ಗಾ ಪ್ರದೇಶದಲ್ಲಿ ನಡೆದಿರುವ ಘಟನೆಗಳ ಮತ್ತು ಇತರ ಪ್ರದೇಶಗಳನ್ನು ಅವಲೋಕಿಸುವುದರ ಮೂಲಕ ವಿವರಣೆಯನ್ನು ನೀಡಲು ಪ್ರಯತ್ನಿಸಲಾಗಿದೆ. ಗುಲಬರ್ಗಾ ಪ್ರದೇಶವು ಹೈದರಾಬಾದ್ ನಿಜಾಮನ ಆಳ್ವಿಕೆಯ ಅವಧಿಗೆ ಸಂಬಂಧಿಸಿದಂತೆ ಶರಣಬಸವೇಶ್ವರರ ಗೋಪುರದ ಕಳಶಾರೋಹಣಾ ಪ್ರಕರಣ, ಜೈನ ದಿಗಂಬರರೊಂದಿಗೆ ಸಂಘರ್ಷ, ಶರಣಬಸವೇಶ್ವರ ದೇವಾಲಯದ ಗಂಟೆ ಶಬ್ದದ ಗಲಾಟೆ ಮತ್ತು ಹೋಳಿ ಹಬ್ಬದ ಗಲಾಟೆಗಳ ಕುರಿತು ವಿವರಿಸಲಾಗಿದೆ.

ಪ್ರಸ್ತುತ ಅಧ್ಯಾಯದ ಎರಡನೆಯ ಭಾಗದಲ್ಲಿ ಸಾಮರಸ್ಯ ಕುರಿತು ಹಿಂದೂ-ಇಸ್ಲಾಂ ಧರ್ಮಗಳ ಸಾಮರಸ್ಯ ಮತ್ತು ನಿಜಾಮನ ಸೌಹಾರ್ದತೆಯ ಗುಣವನ್ನು ಕುರಿತು ಅಭ್ಯಸಿಸಲಾಗಿದೆ.

೪.೨. ಸಂಘರ್ಷಗಳು

ಭಾರತದಂತಹ ದೇಶದಲ್ಲಿ ಕೋಮುವಾದದ ಇನ್ನೊಂದು ಮುಖವೇ ಸಂಘರ್ಷಗಳು. ದಿನನಿತ್ಯ ನಡೆಯುವ ಗಲಭೆಗಳು ಒಂದಿಲ್ಲೊಂದು ಕೋಮುವಿನ ಮುಖವಾಡ ಹಾಕಿಕೊಂಡೇ ಸುದ್ದಿಯಾಗುತ್ತವೆ. ಪ್ರಸ್ತುತ ಸಂದರ್ಭದಲ್ಲಿ 'ಕೋಮು' ಎಂದರೆ, ವಿವಿಧ ಧರ್ಮಗಳ ಜನರ ನಡುವೆ ಅಂತರವನ್ನು ಸ್ಥಾಪಿಸುವುದು. ಇದರಿಂದ ಗಲಭೆ ಸಂಭವಿಸಿದಾಗ 'ಕೋಮು'ವಿನ ಬಣ್ಣ ಬಳಿಯುವುದು. ಅಲ್ಲದೆ ಒಂದು ಧರ್ಮದ ಒಳ ಪಂಗಡ, ವಿಭಿನ್ನ ಜಾತಿಗಳು ಕೂಡ ಕೋಮು ಎಂಬ ಅರ್ಥವನ್ನು ಪಡೆದುಕೊಂಡಿದೆ.

ಪ್ರಸ್ತುತ ಪ್ರಬಂಧದಲ್ಲಿ ಸಂಘರ್ಷಗಳು ಅನಾದಿಕಾಲದಿಂದ ಇಂದಿನ ೨೧ನೇ ಶತಮಾನದಲ್ಲಿಯೂ ಹೇಗೆ ತನ್ನ ಉದ್ದೇಶವನ್ನು ಈಡೇರಿಸಿಕೊಳ್ಳುತ್ತಿದೆ ಎಂಬುದನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಗುಲಬರ್ಗಾವು ಪ್ರಾಚೀನ ಕಾಲದಿಂದ ಹಿಡಿದು ಮಧ್ಯಕಾಲೀನ ಬಹಮನಿ ಸಾಮ್ರಾಜ್ಯದ ಸ್ಥಾಪನೆಯವರೆಗೂ ತನ್ನ ಉನ್ನತಿಯನ್ನು ಮೆರೆದು ಪತನಗೊಂಡ ಪ್ರದೇಶವೆಂದು ಹೇಳಲೇಬೇಕು. ಕಾರಣ, ರಾಜ್ಯ, ಸಾಮ್ರಾಜ್ಯಗಳ ನಡುವಿನ ಕದನ, ಸಂಘರ್ಷಗಳೇ ಅವುಗಳ ಅವನತಿಗೆ ಕಾರಣವೆಂದು ಇತಿಹಾಸಕಾರರು ಅಭಿಪ್ರಾಯ ಪಟ್ಟಿದ್ದಾರೆ. ಈ ಪ್ರದೇಶವು ಹೈದರಾಬಾದ್ ನಿಜಾಮನ ಆಡಳಿತಾವಧಿಯಲ್ಲಿ ನಡೆದ ಘೋರಕೃತ್ಯಗಳನ್ನು ಇಂದಿಗೂ ಕೆಲವು ಹಿರಿಯ ವ್ಯಕ್ತಿಗಳು ತಮ್ಮ ಮೌಖಿಕ ಹೇಳಿಕೆಗಳಿಂದ ಸ್ಪಷ್ಟಪಡಿಸಿದ್ದಾರೆ.

೧. ಶರಣಬಸವೇಶ್ವರ ಗೋಪುರದ ಮೇಲೆ ಕಳಶಾರೋಹಣ ಪ್ರಕರಣ

ಗುಲಬರ್ಗಾದ ಶ್ರೀ ಶರಣಬಸವೇಶ್ವರ ಸಂಸ್ಥಾನವು ಆಗ ಸುಮಾರು ೮೦ ವರ್ಷಗಳಿಂದ ನಡೆದುಕೊಂಡು ಬಂದಿದ್ದ ದೊಡ್ಡ ಧಾರ್ಮಿಕ ಕೇಂದ್ರವಾಗಿತ್ತು. ಶ್ರೀ ಶರಣಬಸವೇಶ್ವರರು ಲಿಂಗೈಕ್ಯರಾಗಿ ಸುಮಾರು ಶತಮಾನವೇ ಗತಿಸಿ ಹೋಗಿತ್ತು. ಅವರ ಸಮಾಧಿಯ ಮೇಲೆ ಗೋಪುರ ಕಟ್ಟಿಸಲಾಗಿತ್ತು. ಇನ್ನೂ ಕಳಶ ಏರಿಸುವುದೊಂದು ಬಾಕಿ ಉಳಿದಿತ್ತು. ಅಷ್ಟೊತ್ತಿಗೆ ಯಾವುದೇ ದೇವಸ್ಥಾನ ಕಟ್ಟಬೇಕಾದರೂ ಹೈದರಾಬಾದ್ ನಿಜಾಮನ ಪೂರ್ವಾನುಮತಿ ಪಡೆಯುವುದು ಕಡ್ಡಾಯವೆಂದು ಸರಕಾರ ಆದೇಶವನ್ನು ಹೊರಡಿಸಿತ್ತು. ೧೯೨೪ರ ಶ್ರಾವಣ

ಮಾಸದ ನಡುವಿನ ಸೋಮವಾರದ ದಿನ ಗೋಪುರದ ಮೇಲೆ ಕಳಶಾರೋಹಣ ಮಾಡಬೇಕೆಂದು ಭಕ್ತವೃಂದ ಸಂಕಲ್ಪ ಮಾಡಿತ್ತು. ಚಿತ್ತಾಪುರದ ಒಬ್ಬ ಭಕ್ತಳು ತನ್ನ ಭಕ್ತಿಯ ಸೇವೆಗಾಗಿ ಒಂದು ಸುಂದರವಾದ ಕಳಶವನ್ನು ಮಾಡಿಸಿಕೊಟ್ಟಿದ್ದಳು.

ಆ ವರ್ಷ ಮೊಹರಂ ತಿಂಗಳು ಕೂಡ ಶ್ರಾವಣ ಮಾಸದಲ್ಲಿಯೇ ಬಂದಿತ್ತು. ಮೊದಲನೆಯದಾಗಿ ಪೂರ್ವಾನುಮತಿಯಿಲ್ಲದೆ ಕಳಶ ಏರಿಸುವ ಹಾಗಿರಲಿಲ್ಲ. ಎರಡನೆಯದಾಗಿ ಮುಸ್ಲಿಮ ಶೋಕಾಚರಣೆಯ ತಿಂಗಳಿನಲ್ಲಿ ಬೇರೆ ಕೋಮಿನ ಜನರು ಯಾವುದೇ ಉತ್ಸವ ನಡೆಸುವ ಹಾಗಿರಲಿಲ್ಲ. ಆದರೂ ಆಗಿನ ಪೀಠಾಧಿಪತಿಗಳಾದ ಪೂಜ್ಯ ದೊಡ್ಡಪ್ಪ ಅಪ್ಪಾ ಅವರು ಸರಕಾರಕ್ಕೆ ಅನುಮತಿಗಾಗಿ ಪತ್ರದ ಮೂಲಕ ಕೇಳಿಕೊಂಡಿದ್ದರು. ಆದರೆ ಶ್ರೀ ಶರಣಬಸವೇಶ್ವರ ದೇವಾಲಯದ ಪೂರ್ವ ದಿಕ್ಕಿನಲ್ಲಿ ಸುಮಾರು ನಾಲ್ಕೈದು ಕಿಲೋಮೀಟರಿನಷ್ಟು ದೂರದಲ್ಲಿರುವ ಖಾಜಾ ಬಂದೇನವಾಜ್ ದರ್ಗಾದ ಮೇಲೆ ಸಾಯಂಕಾಲದ ಹೊತ್ತು ಮುಳುಗುವಾಗ ಕಳಶದ ನೆರಳು ಬೀಳುತ್ತದೆ ಎಂದು ಕಾರಣ ಕೊಡಲಾಯಿತು. ಆಗ ಬಾಬುರಾವ ಪರೂತೆ ಎನ್ನುವವರು ನಿಜವಾದ ಕಳಶದ ಬದಲಿಗೆ ಇನ್ನೊಂದು ಕಳಶ ತಂದು ಅದನ್ನು ಏರಿಸಲು ಅನುಮತಿ ನೀಡಬೇಕೆಂದು ಪೂಜ್ಯ ಅಪ್ಪಾ ಅವರಲ್ಲಿ ಕೇಳಿಕೊಂಡರು. ಅಂದು ಕಳಶವನ್ನು ಏರಿಸಿದರು. ಈ ಸುದ್ದಿಯಿಂದ ರೊಚ್ಚಿಗೆದ್ದ ರಜಾಕಾರ ಗೂಂಡಾಗಳು ಕವಡಿ ಪೀರನ ಸವಾರಿಯಲ್ಲಿ ಸೇರಿ ದೇವಸ್ಥಾನದ ಮೇಲೆ ಹಲ್ಲೆ ಮಾಡಿ ವಿಗ್ರಹವನ್ನು ಭಗ್ನಗೊಳಿಸಿದರು. ಗೋಪುರದ ಮೇಲೆ ಏರಿಸಿದ್ದ ಕಳಶವನ್ನು ತೆಗೆದು ಹಾಕಿದರು.

ಈ ದಂಗೆಯನ್ನು ನಿಯಂತ್ರಿಸಲು ಪೊಲೀಸರು ಬಂದರು. ಪೊಲೀಸರ ತಂಡದಲ್ಲಿ ಸ್ವತಃ ಐ.ಜಿ.ಪಿ ಕ್ರಾಫರ್ಡ್ ಮತ್ತು ಡಿ.ಐ.ಜಿ. ಕಾಶಿಂ ಅಲೀವರೂ ಇದ್ದರು. ಅವರು ರಜಾಕಾರರನ್ನು ನಿಯಂತ್ರಿಸಲು ಬಂದಿದ್ದರು. ಹಿಂದೂಗಳ ಮೇಲೆ ಆಪಾದನೆಯನ್ನು ಮಾಡಲು ರಜಾಕಾರ ತಂಡದವರು ಕೈ ಬಾಂಬನ್ನು ಸಿಡಿಸಿ ಹೊಗೆ ಮುಸುಕುವಂತೆ ಮಾಡಿದರು. ಆಗ ಒಬ್ಬ ರಜಾಕಾರನು ಡಿ.ಐ.ಜಿ. ಕಾಶಿಂ ಅಲಿಯವರ ಮೇಲೆ ಗುಂಡು ಹಾರಿಸಿ ಕೊಲೆ ಮಾಡಿದನು. ಹಿಂದೂಗಳು ಮುಸ್ಲಿಂ ಅಧಿಕಾರಿಯನ್ನು ಕೊಲೆ ಮಾಡಿದರು ಎಂದು ಸುಳ್ಳು ಸುದ್ದಿ ಮಾಡಿದ್ದರಿಂದ ಬಾಬುರಾವ ಪರೂತೆ, ಚೆನ್ನಬಸಪ್ಪ ಕುಳಗೇರಿ ಭಾಯೀ ಬನ್ಸಿಲಾಲ ಹಾಗೂ ಇನ್ನೂ ಕೆಲವರ ಮೇಲೆ ದಾವೆ ಹೂಡಲಾಯಿತು. ವಿಪರ್ಯಾಸವೆಂದರೆ, ಕೊನೆಗೂ ನಿಜಾಮನ ಆಳ್ವಿಕೆ ಇರುವವರೆಗೆ ಶ್ರೀ ಶರಣಬಸವೇಶ್ವರ ಗೋಪುರದ ಮೇಲೆ ಕಳಶ ಏರಲೇ ಇಲ್ಲ. ಮುಂದೆ ಹೈದರಾಬಾದ್ ವಿಮೋಚನೆಯಾದ ಮೇಲೆ ೧೯೪೯ರಲ್ಲಿ ಹೋಳಿ ಹಬ್ಬದ ನಂತರ ಜರುಗುವ ಜಾತ್ರೆಯ ಕಾಲದಲ್ಲಿ ಮಾರ್ಚ್ ೬ ನೆಯ ತಾರೀಕಿನಂದು ಸರದಾರ ಶರಣಗೌಡರು, ಚೆನ್ನಬಸಪ್ಪ ಕುಳಗೇರಿ, ಪೆಂಟರ ಬಾಬುರಾವ ಪರೂತೆ ಮುಂತಾದವರ ಮುಂದಾಳತ್ವದಲ್ಲಿ ಅಸಲಿ ಕಳಶ ಏರಿಸಲಾಯಿತು ಎಂದು ಪ್ರಸ್ತಾಪಿಸಿದ್ದಾರೆ. (ಜಯಶೆಟ್ಟಿ ೨೦೦೬: ೬೬-೬೭)

೨. ಜೈನ ದಿಗಂಬರರೊಂದಿಗೆ ಸಂಘರ್ಷ

ಗುಲಬರ್ಗಾ ಜಿಲ್ಲೆಯ ಆಳಂದದಲ್ಲಿ ಒಮ್ಮೆ ಕೆಲವು ಮುಸ್ಲಿಂ ಮಹಿಳೆಯರು ಒಬ್ಬ ಮುಸ್ಲಿಂ ಪೀರನಲ್ಲಿಗೆ ಹರಕೆಯ ತಟ್ಟೆಗಳನ್ನು ತೆಗೆದುಕೊಂಡು ಹೋಗಬೇಕಾಗಿತ್ತು. ಅವರು ಹೋಗಬೇಕಾಗಿದ್ದ ಮಾರ್ಗಮಧ್ಯದಲ್ಲಿ

ದಿಗಂಬರ ಜೈನ ಸಮಾಜದ ಕಾರ್ಯಕ್ರಮದ ಉದ್ದೇಶಕ್ಕೆ ಮಂಟಪ ಹಾಕಲಾಗಿತ್ತು. ಹರಕೆ ಹೊತ್ತುಕೊಂಡು ಹೋಗುವ ಮಹಿಳೆಯರ ಹಾದಿಯಲ್ಲಿ ಬೇರೆ ಧರ್ಮೀಯ ಉತ್ಸವಗಳು ನಡೆಯಬಾರದೆಂದು ಆ ಮಂಟಪವನ್ನು ಕಿತ್ತು ಹಾಕಲಾಯಿತು. ಇದೇ ರೀತಿ ಇನ್ನೊಂದು ಸಂದರ್ಭದಲ್ಲಿ ಮುಸ್ಲಿಮನೊಬ್ಬನ ಹೆಣ ಸಾಗಿಸುವ ಹಾದಿಯಲ್ಲಿ ಮದುವೆಗಾಗಿ ಶಾಮಿಯಾನ ಹಾಕಲಾಗಿತ್ತು. ಹೆಣದ ಮೆರವಣಿಗೆಯವರು ಆ ಶಾಮಿಯಾನವನ್ನು ಕಿತ್ತು ಹಾಕಿದರು. ಇನ್ನೊಮ್ಮೆ ರಥೋತ್ಸವವನ್ನು ತಡೆಯುವುದಕ್ಕಾಗಿ ಮುಸ್ಲಿಂ ಮತಬಾಂಧವರು ದೇವರ ಮೂರ್ತಿಯ ಜೊತೆಗೆ ರಥದ ಮೇಲೆ ಸೀಮೆ ಎಣ್ಣೆ ಸುರಿದು ಮೂರ್ತಿಯನ್ನು ರಥವನ್ನು ಸುಟ್ಟು ಬೂದಿ ಮಾಡಿದರು(ಜಯಶೆಟ್ಟಿ ೨೦೦೬: ೫೧).

೩. ವೀರಶೈವ ಸಮಾಜದ ಮೇಲೆ ನಿಜಾಮಸೈನ್ಯದ ದೌರ್ಜನ್ಯ

ಹಿಂದೂ ಧರ್ಮದ ಹಿತವನ್ನು ಕಾಯುತ್ತಿದ್ದ ವೀರಶೈವ ಸಮಾಜವು ಮೇಲಿನ ಘಟನೆಗಳಿಂದಾಗಿ ತನ್ನ ಸಂಘಟನೆಯಾದ "ವೀರಶೈವ ಸಮಾಜವನ್ನು" "ನಿಜಾಮ ಪ್ರಾಂತೀಯ ವೀರಶೈವ ಪರಿಷತ್ತು" ಎಂಬುದಾಗಿ ಮಾರ್ಪಾಡು ಮಾಡಿಕೊಂಡಿತು. ಶ್ರೀ ಸಂಗ್ರಾಮಪ್ಪ ಸೆಟಗಾರ, ಪ್ರಭುರಾವ ಅವರು ಇದರ ಪ್ರಥಮ ಕಾರ್ಯದರ್ಶಿಯಾಗಿದ್ದರು. ಈ ಸಂಘಟನೆಯಿಂದ ಹಳ್ಳಿ ಹಳ್ಳಿಗೂ ವೀರಶೈವ ತರುಣ ಸಂಘಗಳು ತಲೆ ಎತ್ತಿದ್ದವು. ವೀರಶೈವರ ಸಂಘಟನೆಯಿಂದಾಗಿ ನಿಜಾಮ ಮತ್ತು ಬ್ರಿಟಿಷರ ವಿರುದ್ಧ ಪ್ರತಿಭಟಿಸುವಲ್ಲಿ ಜನರಲ್ಲಿ ಬಲ ಬಂದಿತು. ಪ್ರತಿವರ್ಷವೂ ವೀರಶೈವ ಪರಿಷತ್ತಿನ ಅಧಿವೇಶನಗಳು ನಡೆಯುತಿದ್ದವು. ಅಧಿವೇಶನಗಳಿಗೆ ದೊಡ್ಡ ಪ್ರಮಾಣದಲ್ಲಿ ಜನ ಸೇರಿ, ತಮ್ಮ ಧರ್ಮದ ಬಗ್ಗೆ ಚರ್ಚೆ ನಡೆಸುತ್ತಿದ್ದರು. ಇದು ನಿಜಾಮನ ವಿರುದ್ಧ ಒಂದು ದೊಡ್ಡ ಬಲವಾಗಿ ಕಾಣಿಸಿಕೊಂಡಿತು. ಇದರಿಂದ ಮುಸ್ಲಿಮರ ದೌರ್ಜನ್ಯಗಳು ನೇರವಾಗಿ ವೀರಶೈವರ ಮೇಲೆ ದಾಳಿಮಾಡಲು ಪ್ರಾರಂಭವಾದವು. ಇದರಿಂದ ವೀರಶೈವ ಮಠಮಾನ್ಯಗಳು ಚಳವಳಿಯ ಚಟುವಟಿಕೆಗಳಿಂದ ಕೂಡಿದವು. ಇಂತವುಗಳಲ್ಲಿ ಕಲಬುರ್ಗಿಯ ಶ್ರೀ ಶರಣಬಸವೇಶ್ವರ ದೇವಸ್ಥಾನವೊಂದು ಮಹತ್ವದ ಸ್ಥಳವಾಗಿದೆ.

೪. ಗಂಟೆ ಸಪ್ಪಳಕ್ಕಾಗಿ ಗಲಾಟೆ

ಶರಣಬಸವೇಶ್ವರ ದೇವಾಲಯದಲ್ಲಿ ವೀರಶೈವರು ಪೂಜೆ ಸಲ್ಲಿಸುವಾಗ ಗಂಟೆ ಬಾರಿಸುತ್ತಿದ್ದರು. ಈ ಗಂಟೆ ಬಾರಿಸುವ ಸಮಯಕ್ಕೆ ಬಂದೇನವಾಜ್ ದರ್ಗಾದಲ್ಲಿ ಮುಸ್ಲಿಂ ಸಮುದಾಯದವರು ನಮಾಜ್ ಮಾಡುತ್ತಿದ್ದರು. ಆಗ ಅವರಿಗೆ ಗಂಟೆ ಶಬ್ದ ಕೇಳಿಸುತ್ತಿದ್ದರಿಂದ ಮುಸ್ಲಿಂ ತತ್ವಗಳಿಗೆ ವಿರುದ್ಧವಾಗುತ್ತದೆ ಎಂಬ ಕಾರಣ ನೀಡಿ ನಿಜಾಮನ ಮೂಲಕ ಮುಸ್ಲಿಮರು ಗಂಟೆ ಬಾರಿಸದಂತೆ ಫರ್ಮಾನು ಹೊರಡಿಸಲು ಆಗ್ರಹಿಸಿದರು (ಪಾಟೀಲ ೨೦೦೨: ೨೨೪).

೫. ಹೋಳಿ ಹಬ್ಬದ ಗಲಾಟೆ

ಗುಲಬರ್ಗಾದಲ್ಲಿಯೂ ಆರ್ಯಸಮಾಜದ ಚಟುವಟಿಕೆಗಳು ಭರದಿಂದ ಸಾಗಿದ್ದವು. ೧೯೩೮ರ ಹೋಳಿ ಹಬ್ಬ ಸಂದರ್ಭದಲ್ಲಿ ಮುಸ್ಲಿಮರ ದಂಗೆಯಾಯಿತು. ನಗರದಲ್ಲಿ ಮುಸ್ಲಿಂ ಜನಸಂಖ್ಯೆಯು

ಗಣನೀಯವಾಗಿದ್ದರಿಂದ ಅವರು ಕಾಲುಕೆದರಿ ಹಿಂದೂಗಳೊಂದಿಗೆ ಸಂಘರ್ಷಕ್ಕಿಳಿಯುತ್ತಿದ್ದರು. ಈ ಗಲಭೆಯಲ್ಲಿ ಓರ್ವ ಮುಸ್ಲಿಂ ಹತನಾದ. ತಾಲಸಿಂಗ್, ವಿಜಯಪಾಲ, ಹಣಮಂತರಾವ, ಭೈರವಲಾಲ, ಋತುಸಿಂಗ್ ಮತ್ತು ಶರಣಪ್ಪ ಮುಂತಾದವರು ಈ ಗಲಭೆಯಲ್ಲಿ ಅಪರಾಧಿಗಳೆಂದು ಗುಲಬರ್ಗಾ ನ್ಯಾಯಾಲಯವು ಶಿಕ್ಷೆ ವಿಧಿಸಿರುವುದು ತಿಳಿದುಬರುತ್ತದೆ (ಹೇಜೀಬ್ ೨೦೦೧: ೧೫೬).

ಈ ಹಲವಾರು ಅಮಾನುಷ ಕೃತ್ಯಗಳನ್ನು ತಡೆಯಲು ಹೈದಾರಾಬಾದ್ ಕರ್ನಾಟಕದಾದ್ಯಂತ ಅನೇಕ ಹೋರಾಟ ಸಂಘಟನೆಗಳು ಹುಟ್ಟಿಕೊಂಡು ನಿಜಾಮ ಸರ್ಕಾರದ ದೌರ್ಜನ್ಯದ ಆಡಳಿತ ಸ್ವರೂಪವನ್ನು ದಮನಗೊಳಿಸಲು ಸಂಘಟಿತಗೊಂಡಿದ್ದು ಅವುಗಳಲ್ಲಿ ಪ್ರಮುಖ ಪಾತ್ರ ವಹಿಸಿದ ಸಂಘಟನೆಗಳಾದ ಆರ್ಯಸಮಾಜ, ಹೈದರಾಬಾದ್ ಸ್ಟೇಟ್ ಕಾಂಗ್ರೆಸ್, ನಿಜಾಮ ಕರ್ನಾಟಕ ಪರಿಷತ್ತು, ವಂದೇಮಾತರಂ ಚಳವಳಿ ಇತ್ಯಾದಿ ಸಂಘಟನೆಗಳು ಮತ್ತು ಚಳವಳಿಗಳು ನಿಜಾಮ ಆಡಳಿತವನ್ನು ಪ್ರತಿರೋಧ ಮಾಡಿದ್ದವು. ಈ ದೆಸೆಯಲ್ಲಿ ಹಲವು ಹೋರಾಟಗಾರರು ಮತ್ತು ಸ್ಥಳೀಯ ನಾಯಕರು ಮಹತ್ವದ ಪಾತ್ರ ನಿರ್ವಹಿಸಿದರು. ಶ್ರೀ ರಮಾನಂದ ತೀರ್ಥರು, ಪಂಡಿತ ತಾರಾನಾಥ, ವಿದ್ಯಾದರ ಗುರೂಜಿ, ಸರ್ದಾರ ಶರಣಗೌಡಪಾಟೀಲ ಇನಾಂದಾರ್ ಇನ್ನೂ ಹಲವಾರು ಹೋರಾಟಗಾರರು ರಾಷ್ಟ್ರೀಯ ಹೋರಾಟಗಾರರ ನೆರವಿನಿಂದ ಹೈದರಾಬಾದ್ ಕರ್ನಾಟಕದ ವಿಮೋಚನೆಯನ್ನು ಹತ್ತು ಹಲವು ಸಂಘರ್ಷಗಳ ಪಥದಲ್ಲಿ ಸಾವು-ನೋವುಗಳ ಉಗ್ರ ಹೋರಾಟದ ಪ್ರತಿಫಲವಾಗಿ ಕೊನೆಗೆ ೧೯೪೮ ಸೆಪ್ಟೆಂಬರ್ ೧೭ ರಂದು ನಿಜಾಮ ಆಡಳಿತದಿಂದ ವಿಮೋಚನೆ ಹೊಂದಿ ಭಾರತ ಸರಕಾರದಲ್ಲಿ ವಿಲೀನಗೊಂಡಿತ್ತು.

## ೪.೩. ಸಾಮರಸ್ಯ

ದೇಶದಲ್ಲಿ ವಾಸಿಸುತ್ತಿರುವ ಹಿಂದುಗಳು, ಮುಸ್ಲಿಮರು, ಸಿಖ್ಖರು ಮತ್ತು ಬೌದ್ಧರು ಬೇರೆ ದೇಶದವರಲ್ಲ ಮತ್ತು ಶತ್ರು ಕುಲದವರಲ್ಲ ಎಂಬುದನ್ನು ಮೊದಲು ಪ್ರತಿಯೊಬ್ಬರೂ ತಿಳಿದುಕೊಳ್ಳಬೇಕು. ಈ ನೆಲ ಈ ಜಲ ಎಲ್ಲರಿಗೂ ಪೂಜ್ಯವೆ. ಅನ್ನವನ್ನು ತಿಂದು, ಗಾಳಿಯನ್ನು ಸೇವಿಸಿ, ನೀರನ್ನು ಕುಡಿದು ಬದುಕುತ್ತಿರುವ ನಾವೆಲ್ಲ ಭಾರತಾಂಬೆಯ ಮಕ್ಕಳೇ ವಿನಾ ಇಂಥವರು ಇಂತಹ ಜಾತಿಯವರೆಂದು ಹೇಳಿ ಜಾತಿವಾದಕ್ಕೆ ಅಂಟಿಕೊಂಡರೆ ದೇಶ ಉದ್ಧಾರವಾಗುವುದಿಲ್ಲ. ಅದಕ್ಕಾಗಿ ದೇಶದಲ್ಲಿ ದುಡಿಯುವ ಕಾಯಕ ವರ್ಗವು ಒಂದಾಗಿ ಬದುಕಬೇಕು. ''ಜಾತಿಭೇದ, ಜಾತಿಮತ್ಸರ, ಭಾಷಾವಾರು ಪಕ್ಷಭೇದಗಳನ್ನು ಮರೆತು ನಾವೆಲ್ಲ ಭಾರತೀಯರು, ಒಂದೇ ವೇದಿಕೆಯಲ್ಲಿ ಒಟ್ಟುಮಾಡಿ ಭಾರತವನ್ನು ಪ್ರಪಂಚದ ಶಕ್ತಿಶಾಲಿ ಹಾಗೂ ಮಹಾನ್ ರಾಷ್ಟ್ರವನ್ನಾಗಿಸಬೇಕು''. ಈ ರೀತಿಯಾಗಿ ಅಂಬೇಡ್ಕರ್ ಅವರು ಮಾನವಲೋಕ ಕೋಮು ಸೌಹಾರ್ದಯುತವಾಗಿ ಬದುಕಬೇಕೆಂದರೆ ನಮ್ಮ ಮಧ್ಯೆ ಹೆಮ್ಮರವಾಗಿ ಬೆಳೆದು ನಿಂತಿರುವ ಜಾತೀಯತೆ, ಅಸ್ಪೃಶ್ಯತೆ ಮತ್ತು ಧರ್ಮಧರ್ಮಗಳಲ್ಲಿರುವ ಅತಿಯಾದ ಧಾರ್ಮಿಕ ಅಂಧಾನುಕರಣೆಗಳು ನಿರ್ನಾಮಗೊಂಡಾಗ ಮಾತ್ರ ಸಾಮರಸ್ಯ ಸಾಧ್ಯ. ಇಲ್ಲದಿದ್ದರೆ ಪ್ರತ್ಯೇಕತೆ ಮತ್ತು ವಿಶಿಷ್ಟತೆ ಅವರನ್ನು ಸಮಾಜ ವಿರೋಧಿಗಳನ್ನಾಗಿ ಪರಸ್ಪರ ವೈರಿಗಳನ್ನಾಗಿ ಮಾಡುತ್ತದೆ (ಪೋತೆ ೨೦೦೦: ೮೫). ಇನ್ನೂ ಧಾರ್ಮಿಕ ಹಿನ್ನೆಲೆಯಲ್ಲಿ ಹಿಂದೂಗಳು ಆಚರಿಸುವ ಜಾತ್ರೆ-ಉತ್ಸವಗಳು ಕೂಡ ಕೋಮು ಸೌಹಾರ್ದತೆಗೆ ವಿಶಿಷ್ಟಕಾಣಿಕೆಯನ್ನು ಸಲ್ಲಿಸುತ್ತಿವೆ.

ಕಲಬುರ್ಗಿ ಶರಣಬಸವೇಶ್ವರ ಜಾತ್ರೆಯ ರಥೋತ್ಸವದ ಸಂದರ್ಭದಲ್ಲಿ ನಗರದ ಖಾಜಾ ಬಂದೇನವಾಜ್ ದರ್ಗಾದ ಧಾರ್ಮಿಕ ಮುಖಂಡರು ಸಂಪ್ರದಾಯದಂತೆ ಭಾಗವಹಿಸುವುದುಂಟು. ಅದೇ ರೀತಿಯಲ್ಲಿ ಖಾಜಾ ಬಂದೇನವಾಜ್ ಉರುಸುವಿನಲ್ಲಿ ಹಿಂದೂಗಳು ಭಾಗವಹಿಸುತ್ತಾರೆ. ಕಲಬುರ್ಗಿ ಜಿಲ್ಲೆಯ ಸುರಪುರ ತಾಲೂಕಿನ ತಿಂಥಿಣಿ ಮೌನೇಶ್ವರ, ಕೊಡೇಕಲ್ ಬಸವಣ್ಣ, ಚಿಕ್ಕಮಗಳೂರಿನ ಬಾಬಾಬುಡನ್‌ಗಿರಿಯ ದತ್ತಪೀಠ-ದರ್ಗಾ, ಧಾರವಾಡದ ಕುಂದಗೋಳ ತಾಲೂಕಿನ ಶಿಶುನಾಳ ಶರೀಫ ಸಾಹೇಬರ ಜಾತ್ರೆಗಳಲ್ಲಿ ಹಿಂದೂ-ಮುಸ್ಲಿಮರ ಭಾವೈಕ್ಯತೆಯ ಸಾಮರಸ್ಯವನ್ನು ಕಾಣಬಹುದು. ಮುಂಬಯಿಯ ಹಾಜಿ ಮಲಂಗ ದರಗಾದ ಆಡಳಿತವನ್ನು ಬ್ರಾಹ್ಮಣ ಕುಟುಂಬ ನಡೆಸುತ್ತದೆ. ಅಲ್ಲದೆ ದರಗಾದಲ್ಲಿ ಮುಸ್ಲಿಮರ ಸಂಪ್ರದಾಯದಂತೆ ಝೀಯಾರತ್ ಒಮ್ಮೆ ಫಾತೆಹಾ ನಡೆದರೆ ಇನ್ನೊಂದು ಹೊತ್ತಿನಲ್ಲಿ ಹಿಂದೂಗಳ ಆಚರಣೆಯಂತೆ ಲೋಬಾನದ ಹೊಗೆ ಹಾಕಿ ಪೂಜೆ ಮಾಡಲಾಗುತ್ತದೆ. ಇವೆಲ್ಲ ಆಚರಣೆಗಳಲ್ಲಿ ಹಿಂದೂ- ಮುಸ್ಲಿಂ ಧರ್ಮೀಯರ ನಡುವೆ ಸೌಹಾರ್ದತೆಯನ್ನು ಸಾಧಿಸುವ ಘನೋದ್ದೇಶವೇ ಅಡಗಿದೆ.

ಹೀಗೆ ಸಮಾಜದ ಎಲ್ಲ ವರ್ಗಗಳನ್ನು ಸಮಭಾವದಿಂದ ಕಾಣುವ ಎಲ್ಲ ಜಾತಿ ಧರ್ಮ, ಪಂಗಡದವರನ್ನು ಪ್ರೀತಿಯಿಂದ ಬರಮಾಡಿಕೊಳ್ಳುವ ವಿಧಾನ ಹಿಂದೂಗಳ ಹಬ್ಬ, ಜಾತ್ರೆ ಹಾಗೂ ಉತ್ಸವಗಳ ಆಚರಣೆಯಲ್ಲಿ ಜಾರಿಯಲ್ಲಿವೆ. ಈ ಸಾಮರಸ್ಯವಿಲ್ಲದೆ, ಸೌಹಾರ್ದತೆಯಿಲ್ಲದೆ ಸಮಾಜದ ಕಲ್ಯಾಣ ಸಾಧ್ಯವಾಗದು. ಅಂತೆಯೇ ಗಾಂಧೀಜಿಯವರು 'ರಾಮ್-ರಹೀಮ್ ಏಕ್ ಹೈ' 'ಹಿಂದೂ-ಇಸಾಯಿ ಭಾಯಿ ಭಾಯಿ' ಎಂದು ಕರೆದರು. 'ಸಬ್ ಕಾ ಮಾಲೀಕ್ ಏಕ್ ಹೈ' ಎಂದು ಸಿರಡಿ ಸಾಯಿಬಾಬಾ ನುಡಿದರು. ಇಂತಹ ಸೌಹಾರ್ದತೆ ಬೆಳೆಸುವಲ್ಲಿಯೇ ವ್ಯಷ್ಟಿ-ಸಮಷ್ಟಿಗಳ ಉದ್ಧಾರವಿದೆ. ಅದನ್ನು ನಾವೆಲ್ಲರೂ ಕೂಡಿಯೇ ಸಾಧಿಸಬೇಕಾಗಿದೆ (ಪೋತೆ ೨೦೦೦:೬೭).

ಜವಾಹಾರಲಾಲ್ ನೆಹರು ಅವರು ತಮ್ಮ ಕೃತಿಯಾದ 'ಡಿಸ್ಕವರಿ ಆಫ್ ಇಂಡಿಯಾ'ದಲ್ಲಿ ರಾಷ್ಟ್ರದ ಧರ್ಮ, ಸಂಸ್ಕೃತಿಗಳಿಂದ ಬೇರ್ಪಟ್ಟ ನೆಹರು, ಪಾಶ್ಚಾತ್ಯ ವಿಚಾರಗಳಿಂದ ಪ್ರಭಾವಿತರಾಗಿದ್ದರೂ ಹಿಂದೂ ರಾಷ್ಟ್ರ, ಹಿಂದೂ ಸಂಸ್ಕೃತಿಯಿಂದ ಕೂಡಲೇ ನೆಹರು ಅವರಿಗೆ ಒಂದು ಜುಗುಪ್ಸೆಯುಂಟಾಗುತ್ತಿತ್ತು. ಮೊಗಲ್ ಸಂಸ್ಕೃತಿಯಿಂದ ಹಿಂದೂ ಸಂಸ್ಕೃತಿ ಶ್ರೀಮಂತವಾಗಿ ರಾಷ್ಟ್ರದಲ್ಲಿ 'ಸಮ್ಮಿಶ್ರ ಸಂಸ್ಕೃತಿ' ಉದಯವಾಯಿತು ಎಂದು ನೆಹರು ಅಭಿಮಾನ ಪಟ್ಟುಕೊಂಡಿದ್ದಾರೆ. ಭಾರತದ ಮೇಲೆ ಮುಸ್ಲಿಂ ಆಕ್ರಮಣವಾಯಿತೆಂಬುದು ತಪ್ಪು ಮತ್ತು ದಾರಿತಪ್ಪಿಸುವ ಕಲ್ಪನೆಯೆಂದು ನೆಹರು ವಾದಿಸಿದ್ದಾರೆ. ಮುಸ್ಲಿಮರು ಭಾರತವನ್ನು ತಮ್ಮ ತಾಯ್ನಾಡು ಎಂದು ಭಾವಿಸಿದ್ದರಿಂದಲೇ ರಜಪೂತರು ಅವರ ಸ್ವಾಮಿತ್ವವನ್ನು ಒಪ್ಪಿಕೊಂಡು ಸ್ನೇಹ ಸೌಹಾರ್ದಗಳ, ಸಂಸ್ಕೃತಿ ಸಮನ್ವಯಗಳ ಸುಂದರ ಪರಿಸರ ನಿರ್ಮಾಣ ಮಾಡಲಿಕ್ಕೆ ಕಾರಣರಾದರು; ದಿಲ್ಲಿಯ ಸುಲ್ತಾನನಾದ ಗಿಯಾಸುದ್ದೀನ್ ತುಘಲಕ್ ಸ್ವತಃ ಹಿಂದೂ ಸ್ತ್ರೀಯನ್ನೇ ಮದುವೆಯಾಗಿದ್ದ, ಗುಲಬರ್ಗಾದ ಬಹಮನಿ ಸುಲ್ತಾನ ಫೀರೋಜ್ ಶಾಹನು ವಿಜಯನಗರದ ಅರಸ ಒಂದನೇ ದೇವರಾಯನ ಮಗಳನ್ನು ಮದುವೆಯಾಗಿದ್ದ. ಮುಸ್ಲಿಂ ಸುಲ್ತಾನರು ಹಿಂದೂಗಳೊಂದಿಗೆ ವೈವಾಹಿಕ ಸಂಬಂಧ ಬೆಳೆಸಿಕೊಂಡಿದ್ದರು ಎಂದು ಹೇಳುವುದರಲ್ಲಿ ನೆಹರು ಬಹಳ ಅಭಿಮಾನ ಪಟ್ಟುಕೊಂಡಿದ್ದಾರೆ (ಹೇಜಿಬ್ ೨೦೦೧: ೭೭).

೧. ವೀರಶೈವ ಮತ್ತು ಮುಸಲ್ಮಾನ ಶ್ರದ್ಧೆಗಳ ಐಕ್ಯತೆ

ವೀರಶೈವರಲ್ಲಿ ಮಹಾದೇವ ಪಾರ್ವತಿಯರಿಂದ ನರವಂಶದ ಉತ್ಪತ್ತಿ ಆರಂಭವಾಯಿತು. ಅದೇ ಪ್ರಕಾರವಾಗಿ ಮುಸ್ಲಿಮರಲ್ಲಿ ಆದಂ ಮತ್ತು ಹವ್ವಾ ಇವರಿಂದ ನರವಂಶದ ಉತ್ಪತ್ತಿಯಾಯಿತು. ಸಿಂಹಳ ದ್ವಿಪದಲ್ಲಿ ಮಹಾದೇವನ ಪಾದವಿದೆ. ಸಿಂಹಳ ದ್ವೀಪದಲ್ಲಿ ಆದಂ ಪಾದವಿದೆ. ಈಶ್ವರನ ಮಗ ಗಣಪತಿಯಾದರೆ ಮಹಮ್ಮದ್ ಪೈಗಂಬರ್ ಅಳಿಯ ಹ ಅಲೀ ಗಣಪತಿಯ ಸ್ವರೂಪದಲ್ಲಿದ್ದಾರೆ. ಈಶಾನ್ಯನ ಮುಖದಿಂದ ಆಕಾಶ ದೊರಕಬೇಕು ಎಂದು ಹಿಂದೂಗಳು ನಂಬಿದರೆ ಸನ್ನಿಧಾನ ಜಗದ್ಗುರು ಹಜರತ್ ಮೊಹಮ್ಮದ್‌ರಿಂದ ಆಕಾಶ ಉಂಟಾಯಿತು ಎಂದು ಒಪ್ಪಿಕೊಂಡಿದ್ದಾರೆ. ಮಠದಲ್ಲಿ ಪೋಷಿಸಲ್ಪಡುವ ಶಿಶುವಿಗೆ ಮರಿಸ್ವಾಮಿ ಎನ್ನುತ್ತಾರೆ. ನಂತರ ಅವನು ಮಠದ ಪಟ್ಟಾಧಿಕಾರಿಯಾಗುತ್ತಾನೆ. ಅದೇ ರೀತಿಯಲ್ಲಿ ಮುಸ್ಲಿಮರು ಹಜರತ್ ಮೂಸು ಪೈಗಂಬರ ಸಂಗಡ ವಲಸೆ ಮಾಡಿ ಬಂದವರಲ್ಲಿ ಮಿಶನರಿಯರ ಆಶ್ರಮದಲ್ಲಿ ಪೋಷಿಸಲ್ಪಟ್ಟ ಯಹೂದಿ ಶಿಶು ಒಬ್ಬನಿದ್ದನು. ಅವನಿಗೆ ಮರಿಸ್ವಾಮಿ ಎಂದೆನ್ನುತ್ತಾರೆ. ಇದರ ಉಲ್ಲೇಖ ಕುರಾನಿನಲ್ಲಿ ಇದೆ. ಜಂಗಮ(ಪರಿಪೂರ್ಣ ಮಾನವ)ನು ರುದ್ರರೂಪ ಘನಾಘರಿ ರಸೂಲ್ ಮಾನವರೇ ಪರಿಪೂರ್ಣ ಮಾನವರು ಲಿಂಗದಲ್ಲಿ ಎಲ್ಲಾ ವಸ್ತುಗಳು ಅಡಕವಾಗಿವೆ. ಮಾನವರಲ್ಲಿ ಎಲ್ಲಾ ವಸ್ತುಗಳು ಅಡಕವಾಗಿವೆ (ಮಲ್ಲಿಕಾರ್ಜುನಗೌಡ ೧೯೯೬: ೨೬೦-೨೬೧).

ವಿಗ್ರಹಾರಾಧಕರಲ್ಲಿ ವಿಗ್ರಹಗಳಿಗೆ ಪ್ರಾಣಿಗಳನ್ನು ಹರಕೆ ಬಿಡುವ ಸಂಪ್ರದಾಯವಿದೆ. ಮುಸ್ಲಿಮರೂ ಸಹ ಗೋರಿಗಳ ಹೆಸರಲ್ಲಿ ಹರಕೆ ಬಿಡುತ್ತಾರೆ.

ವಿಗ್ರಾಹಾರಾಧಕರು ದೇವಾಲಯಗಳನ್ನು ನಿರ್ಮಿಸುತ್ತಾರೆ. ಅದೇ ತರಹ ಮುಸ್ಲಿಮರು ಇಮಾಮ್ ಬರಾಸ್‌ಗಳನ್ನು(ಮೊಹರಂ ತಾಜಿಯಾ) ಇಡುವ ಆಲಯಗಳನ್ನು ನಿರ್ಮಿಸುತ್ತಾರೆ.

ವಿಗ್ರಹಾರಾಧಕರು ವಿಗ್ರಹಗಳ ಮುಂದೆ ಸಿಹಿತಿಂಡಿಗಳನ್ನಿಟ್ಟು ಅದನ್ನು ಬಹು ಭಕ್ತಿಯಿಂದ ಸೇವಿಸುತ್ತಾರೆ. ಮುಸ್ಲಿಮರೂ ಸಹ ಗೋರಿಗಳು ಮತ್ತು ತಾಜಿಯಾಗಳ ಮುಂದೆ ಸಿಹಿತಿಂಡಿಗಳನ್ನಿಟ್ಟು(ಅದಕ್ಕೆ ಮುಘರಿತ್ ಎನ್ನುವರು) ಭಕ್ತಿಯಿಂದ ಸೇವಿಸುತ್ತಾರೆ.

ಹಿಂದೂಗಳು ದೇವಸ್ಥಾನದಿಂದ ಹಿಂದಿರುಗುವಾಗ ಹಣೆಯ ಮೇಲೆ ಬಣ್ಣದ ಚಿಹ್ನೆಗಳು, ಕಿವಿಗಳಲ್ಲಿ ಹೂವುಗಳನ್ನು ಧರಿಸುತ್ತಾರೆ. ಅದೇ ರೀತಿ ಮುಸ್ಲಿಮರು ಸಹ ಗೋರಿಗಳ ಬಟ್ಟೆಗಳ ಮೇಲೆ ಸುಗಂಧ ದ್ರವ್ಯಗಳನ್ನು ಸಿಂಪಡಿಸುತ್ತಾರೆ. ಆ ಬಟ್ಟೆಗಳಿಗೆ ಮುತ್ತಿಟ್ಟು ಕೈಯಿಂದ ಮುಟ್ಟುತ್ತಾರೆ. ಅಲ್ಲಿನ ಮೇಲ್ವಿಚಾರಕರಿಂದ ಈ ಬಟ್ಟೆಗಳ ರಾಶಿಯಿಂದ ಹರಿದ ಬಟ್ಟೆಯ ತುಂಡುಗಳನ್ನು ತಲೆಯ ಸುತ್ತ ಕಟ್ಟಿಕೊಳ್ಳುತ್ತಾರೆ. ಈ ಕ್ರಿಯೆ ಮುಗಿದ ನಂತರ ಅಲ್ಲಿಂದ ರಾಜದರ್ಬಾರಿನ ಮೂಲಕ 'ಕಿಲ್ಲತ್ತು' ಪಡೆದಂತೆ ಉಲ್ಲಸಿತರಾಗಿ ಮನೆಗೆ ಹಿಂದಿರುಗುತ್ತಾರೆ.

ವಿಗ್ರಹಾರಾಧಕರು ದೈವದ ಹೆಸರು ವಂಶಾವಳಿಯನ್ನು ಸೂತ್ರರೂಪದಲ್ಲಿ ಪ್ರಾರ್ಥನೆಯಲ್ಲಿ ಸ್ತುತಿಸುತ್ತಾರೆ. ಸಂತಾರಾಧಕರು ಕೂಡ ಅಲ್ಲಾನ ಹೊರತುಪಡಿಸಿ ಸಂತರ ವಂಶಾವಳಿಯನ್ನು ಸ್ತುತಿಸುತ್ತಾರೆ. ನಮಗೆ ತಿಳಿದಿರುವ ಹಾಗೆ ಧಾರ್ಮಿಕ ಸುಧಾರಣೆಗಳು ಮತೀಯ ಸಂಘಟನೆಗಳು ಸ್ಪಷ್ಟವಾಗಿ ಕಾಣಿಸಿಕೊಂಡದ್ದು ಸ್ವಾತಂತ್ರ್ಯ ಪೂರ್ವದ ಬ್ರಿಟಿಷ್ ವಸಾಹತುಶಾಹಿ ಕಾಲದಲ್ಲಾಗಿದೆ. ಕೋಮುವಾದದ ಮೂಲಬೀಜಗಳಿರುವುದೂ ಸಹ ಇಲ್ಲಿಯೇ.

ಸ್ವಾತಂತ್ರ್ಯ ಹೋರಾಟದ ಅಗತ್ಯವಾಗಿ ಹುಟ್ಟಿಕೊಂಡ ರಾಷ್ಟ್ರೀಯತಾವಾದವು ಇಂಡಿಯಾದ ಪರಂಪರೆ, ಸಂಸ್ಕೃತಿಯನ್ನು ಅರ್ಥೈಸಲು ಆಗ ತಾನೆ ಕಣ್ಣುಬಿಡುತ್ತಿದ್ದ ಚರಿತ್ರೆ ಮೊದಲಾದ ಸಮಾಜಶಾಸ್ತ್ರಗಳನ್ನು ಬಳಸಿಕೊಂಡಿತು. ಆವರೆಗೆ ಯಾವುದೇ ಪೂರ್ವಗ್ರಹಗಳಿಲ್ಲದೆ ಸೌಹಾರ್ದಯುತವಾಗಿ ಬದುಕುತ್ತಿದ್ದ ಜನರ ನಡುವೆ ಧರ್ಮ, ಸಂಸ್ಕೃತಿ, ರಾಷ್ಟ್ರೀಯತೆಯ ಹೆಸರಲ್ಲಿ ವಿಷ ಹರಡಲಾಯಿತು. ಶತಶತಮಾನಗಳ ಕಾಲದ ಹಿಂದೂ ಮುಸ್ಲಿಂ ಸಾಂಸ್ಕೃತಿಕ ಪರಂಪರೆಯನ್ನು ಅಖಂಡವಾಗಿ ಗ್ರಹಿಸಿದ ಕೇವಲ ಮತೀಯ ದೃಷ್ಟಿಕೋನದಿಂದ ಎರಡಾಗಿ ವಿಭಜಿಸಿ ನಮ್ಮ ಪರಂಪರೆಯನ್ನು ಅರ್ಥೈಸಲು ಹೊರಟಿದ್ದು ದೊಡ್ಡ ವಿಪರ್ಯಾಸದ ಸಂಗತಿಯಾಗಿದೆ (ಮಲ್ಲಿಕಾರ್ಜುನಗೌಡ ೧೯೯೬: ೯೩-೯೪).

ದೇಶದಲ್ಲಿರುವ ಅನೇಕ ಮುಸ್ಲಿಂ ಬಾಂಧವರು ಭಾರತದಲ್ಲಿಯೇ ಉಳಿದು ಭಾರತೀಯತೆ ನೆಲೆಯಲ್ಲಿಯೇ ಬದುಕಿದರೂ ಅಪನಂಬಿಕೆ, ಅತಂತ್ರತೆ ಅವರನ್ನು ಕಾಡುತ್ತಿದೆ. ಸಂಶಯದ ತಳಹದಿ ಅವರನ್ನು ಸದಾ ಪ್ರಶ್ನಾರ್ಥವಾಗಿ ನೋಡುವಂತಾಗಿದೆ. ಇತ್ತೀಚಿನ ಸಂದರ್ಭದಲ್ಲಿ ಘಟಿಸಿದ ಘಟನೆಗಳನ್ನು ಅವಲೋಕಿಸಿದಾಗ ಮತೀಯವಾದವು ಹಿಂದೆಂದೂ ಪಡೆಯದಂಥ ಪ್ರಾಬಲ್ಯವನ್ನು ಇಂದು ಪಡೆದುಕೊಂಡಿದೆ. ಸಮಾನ ವೇದಿಕೆ ಕಲ್ಪಿಸಲು ತಂತ್ರಗಳು ನಡೆದರೂ ಫಲ ಕೂಡಿಲ್ಲ. ಈ ನಿಟ್ಟಿನಲ್ಲಿ ಅನೇಕ ಸಮಾಜವಾದಿ ಹೋರಾಟಗಾರರು ತಮ್ಮ ವಿಮರ್ಶಾತ್ಮಕ ಲೇಖನಗಳು ಮತ್ತು ಭಾಷಣಗಳಿಂದ ವಿಚಾರವಂತರ ಮನಸ್ಸನ್ನು ಸೆಳೆದಿವೆ ಹೊರತು ಇನ್ನೂ ಮತಾಂಧತೆಯನ್ನು ಹೊಂದಿದ ಕೆಲವು ಸಮಾಜಘಾತುಕ ಕುಹಕಿಗಳನ್ನು ಸದೆಬಡಿಯಲು ಪ್ರಯತ್ನಿಸುತ್ತಿದೆ.

**೨. ನಿಜಾಮನ ಸೌಹಾರ್ದತೆ**

ಶರಣಬಸವೇಶ್ವರ ಸಂಸ್ಥಾನದ ಮೇಲೆ ಹಲ್ಲೆ ಮಾಡಿದ ವಿಚಾರವು ಬೆಳಗಾವಿಯಲ್ಲಿ ಮಹಾತ್ಮಾಗಾಂಧಿ ಅವರ ಅಧ್ಯಕ್ಷತೆಯಲ್ಲಿ ಜರುಗಿದ ಕಾಂಗ್ರೆಸ್ ಅಧಿವೇಶನದಲ್ಲಿ ಪ್ರತಿಧ್ವನಿತವಾಯಿತು. ಹಲ್ಲೆಯನ್ನು ಸರ್ವಾನುಮತದಿಂದ ಖಂಡಿಸಿ ಒಂದು ಗೊತ್ತುವಳಿ ಪಾಸು ಮಾಡಲಾಯಿತು. ಅಲಿ ಸಹೋದರರನ್ನು ಹಲ್ಲೆಯ ಬಗ್ಗೆ ವಿಚಾರಿಸಲು ಕಳುಹಿಸಲಾಯಿತು. ಮುಂದೆ ಮಹಾತ್ಮ ಗಾಂಧೀಜಿಯವರು ದಿನಾಂಕ ೨೪.೪.೧೯೨೪ರಂದು ಕಲ್ಬುರ್ಗಿಗೆ ಬಂದು ಅಪ್ಪ ಅವರ ದರ್ಶನಾಶೀರ್ವಾದ ಪಡೆದುಕೊಂಡು ಸಾಂತ್ವನ ಹೇಳಿದರು. ಗಾಂಧಿ ಅವರ ಭೇಟಿಯಿತ್ತ ಸುದ್ದಿ ಕೇಳಿ ನಿಜಾಮ ಅರಸ ಕಲ್ಬುರ್ಗಿಗೆ ಬಂದು ಮಹಾದಾಸೋಹಿ ಮಹಾಸತ್ಪುರುಷರಾದ ಶರಣಬಸವೇಶ್ವರ ಸಮಾಧಿಗೆ ತನ್ನ ಭಕ್ತಿ-ಶ್ರದ್ಧೆಯನ್ನು ಸಲ್ಲಿಸಿ ಐದು ಪ್ರದಕ್ಷಿಣೆಗಳನ್ನು ಹಾಕಿದರು. ದೊಡ್ಡಪ್ಪ ಅಪ್ಪ ಅವರ ದರ್ಶನ ಪಡೆದರು. ನಮ್ಮ ಸರ್ಕಾರವಿದ್ದಾಗ, ನಮ್ಮ ಜವಾನರ ಎದುರೇ ಈ ಹಲ್ಲೆ ನಡೆದುದು ತುಂಬಾ ಹೇಯಕೃತ್ಯ. ನಮ್ಮ ಜವಾನರು ಮಾಡಿದ ತಪ್ಪಿಗೆ ನಾನು ಕ್ಷಮೆ ಯಾಚಿಸುತ್ತೇನೆ ಎಂದು ಹೇಳಿ, ಹಾನಿಯಾದುದನ್ನು ತುಂಬಿಕೊಳ್ಳಲು ನಿಜಾಮ ದೊರೆಯು ಅಪ್ಪ ಅವರಿಗೆ ಹಣ ನೀಡಲು ವಾಗ್ದಾನ ಮಾಡಿದರು. ಆಗ ಅಪ್ಪ ಅವರು ಎಲ್ಲ ಸಮಾಜದವರು ಮಾಡುವ ದೇವಭಕ್ತಿ ಒಂದೇ ಆದುದರಿಂದ ಎಲ್ಲರೂ ಸೌಹಾರ್ದತೆ ಸಹಬಾಳ್ವೆಯಿಂದ ಬದುಕುವಂತೆ ಮತ್ತು ಮುಂದೆ ಇಂತಹ ಅನಾಹುತಗಳು ಜರುಗದಂತೆ ತಾವು ನೋಡಿಕೊಂಡರೆ ಸಾಕೆಂದು ದೊರೆಗೆ ತಿಳಿಸಿ, ಸಮಾಧಾನ ಮಾಡಿ ಕಳುಹಿಸಿಕೊಟ್ಟರೆಂದು ಮೂಲಗಳು ತಿಳಿಸಿವೆ (ಪಾಟೀಲ ೨೦೦೨: ೩೦೧).

ಪ್ರತೀವರ್ಷ ಈ ಸಂಸ್ಥಾನಕ್ಕೆ ಧಾರ್ಮಿಕ, ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಗಣ್ಯಮಾನ್ಯರನ್ನು ಬರಮಾಡಿಕೊಳ್ಳುತ್ತಾರೆ. ಅವರಿಗೆ ವಿಶೇಷ ಗೌರವ ಸನ್ಮಾನ ಮಾಡುವ ಸಂಸ್ಕೃತಿಯನ್ನು ಚಾಚೂ ತಪ್ಪದೆ ನಡೆಸಿಕೊಂಡು ಬರುತ್ತಲಿದೆ. ಜೊತೆಗೆ ದೇವಾಲಯದಲ್ಲಿ ಶ್ರಾವಣ ಮಾಸ ಒಂದು ತಿಂಗಳವರೆಗೆ ಪುರಾಣ ಉಪನ್ಯಾಸ ಕಾರ್ಯಕ್ರಮವನ್ನು ನಾಡಿನ ವಿವಿಧ ವಿದ್ವಾಂಸರಿಂದ ಯಶಸ್ವಿಯಾಗಿ ಮಾಡಿಸುತ್ತಾ ಬರುತ್ತಿದ್ದಾರೆ. ಈ ಪುರಾಣ ಉಪನ್ಯಾಸ ಕಾರ್ಯದಲ್ಲಿ ಜಾತಿ, ಮತ ಎನ್ನದೆ ಎಲ್ಲಾ ವರ್ಗದವರನ್ನು ಒಂದುಗೂಡಿಸುವುದನ್ನು ಕಾಣಬಹುದಾಗಿದೆ. ಇದು ಕಲಬುರ್ಗಿ ಜಿಲ್ಲೆಯಲ್ಲಿ ಉನ್ನತಿಗೆ ಹೆಸರುವಾಸಿಯಾದ ಸಂಸ್ಥಾನವು ಆಗಿದೆ (ನಿಂಗಪ್ಪ ೨೦೦೭:೯೭).

ಬಹಮನಿ ಸಾಮ್ರಾಜ್ಯದ ಸುಲ್ತಾನ ಒಂದನೇ ಅಹಮದ್ ಶಹ ಕ್ರಿ.ಶ. ೧೪೨೨ರಿಂದ ಫೀರೋಜ್ ಶಹ ಸುಲ್ತಾನನ ತರುವಾಯ ಅಧಿಕಾರಕ್ಕೆ ಬಂದಿದ್ದನು. ಇವನು ಖಾಜಾ ಬಂದೇನವಾಜ್‌ರಿಂದ ಪ್ರಭಾವಿತಗೊಂಡು ಅವರಿಂದ ಸೂಫಿ ಎಂದೇ ಕರೆಯಿಸಿಕೊಂಡಿದ್ದ. ಅಲ್ಲದೆ, ಇನ್ನೊಬ್ಬ ಸಂತ ನೈ ಮುತ್ತಲ್ ಕಿರ್ ಮಾನಿಯವರಿಂದ ವಲಿಯೆಂದು ಗುರುತಿಸಲ್ಪಟ್ಟಿದ್ದ. ಅಹಮದ್ ಶಹ ವಲಿ ಯು ಖ್ವಾದರಿಯಾ ಪಂಥದಲ್ಲಿ ದರವೇಶಗಳದ್ದೇ ಆದ ಮಶ್ವಾಯಿಕ್ ಉಪಪಂಗಡದೊಡನೆ ವಿಶೇಷ ಸಂಬಂಧವಿರಿಸಿಕೊಂಡಿದ್ದನು ಹಾಗೂ ಪರ್ಶಿಯಾದಿಂದ ಹೊಸ ಸೂಫಿಗಳನ್ನು ತನ್ನ ರಾಜ್ಯಕ್ಕೆ ಬರಮಾಡಿಕೊಂಡನು. ಹೀಗೆ ಬಂದ ಸೂಫಿಗಳೊಂದಿಗೆ ಸುಲ್ತಾನನ ವೈವಾಹಿಕ ಸಂಬಂಧವಿದ್ದುದು ಮತ್ತು ಬೀದರಿನಲ್ಲಿಯೇ ನೆಲೆ ನಿಂತಿದ್ದು ಇಲ್ಲಿನ ಕಲೆ, ಸಂಸ್ಕೃತಿಗಳ ಮೇಲೆ ಪರ್ಶಿಯಾದ ವಿಶಿಷ್ಟ ಪ್ರಭಾವ ಬೀರಲು ಸಹಾಯಕವಾಯಿತು.

ಖಾಜಾ ಬಂದೇನವಾಜರ ಮರಣಾನಂತರ ಅಹಮದ್ ಶಹ ವಲಿಯು ರಾಜಧಾನಿಯನ್ನು ಗುಲಬರ್ಗಾದಿಂದ ಬೀದರ್‌ಗೆ ವರ್ಗಾಯಿಸಿದ್ದನು. ಮುಂದೆ ತನ್ನ ಅಧ್ಯಾತ್ಮದ ವಿಚಾರಗಳಿಂದ ಮೂಲ ಖಡ್ಗ ನೀತಿಯನ್ನು ತೊರೆದು ಶಾಂತಿ ಸುವ್ಯವಸ್ಥೆಯನ್ನು ನೆಲೆಗೊಳಿಸಿದ್ದನು. ಇಂದಿಗೂ ಹಿಂದೂ ಧರ್ಮೀಯರು ಗುಲಬರ್ಗಾ ಜಿಲ್ಲೆಯ ಆಳಂದ ತಾಲೂಕಿನ ಮಾಡ್ಯಳ ಗ್ರಾಮದಿಂದ ಕಾಲ್ನಡಿಗೆಯಿಂದ ಬೀದರ್ ಜಿಲ್ಲೆಯ ಅಷ್ಟೂರ್ ಗ್ರಾಮದಲ್ಲಿರುವ ಅಹಮದ್ ಶಹ ವಲಿಯ ಗೋರಿಗೆ ಬಂದು ಅಲ್ಲಿ ಜರಗುವ ಉರುಸಿನಲ್ಲಿ ಪಾಲ್ಗೊಳ್ಳುವರು. ಮುಸ್ಲಿಮೇತರರು ಇದನ್ನು ಅಲ್ಲಮಪ್ರಭು ಗುಡಿಯ ಜಾತ್ರೆಯೆಂದು, ಮುಸ್ಲಿಮರು ಅಹಮದ್ ಶಹ ವಲಿಯ ಉರುಸ್ ಎಂದು ಆಚರಿಸುತ್ತಾರೆ. ಇಲ್ಲಿ ಈ ಎರಡು ಧರ್ಮಗಳ ನಡುವಿನ ಭಾವೈಕ್ಯತೆಯ ಗುಣಲಕ್ಷಣವನ್ನು ತಿಳಿದುಕೊಳ್ಳಲು ಸಹಾಯಕವಾಗಿದೆ(ಗೋವಿಂದರಾಜು ೨೦೦೭: ೧೧೨-೧೧೪). ಗಾಂಧೀಜಿಯವರೂ ತಮ್ಮ 'ಹಿಂದ್ ಸ್ವರಾಜ್ಯ'ದಲ್ಲಿ 'ಇಸ್ಲಾಂ ಭಾರತದಲ್ಲಿ ಕತ್ತಿಯಿಂದ ಹರಡಿಲ್ಲ. ಸಂತರ ಪ್ರೀತಿ ವಿಶ್ವಾಸಗಳಿಂದ ಹರಡಿತು' ಎನ್ನುತ್ತಾರೆ.

ಆಧ್ಯಾತ್ಮಿಕ ಜ್ಞಾನದ ಕೇಂದ್ರಗಳಾದ ದರ್ಗಾಗಳು ಹಿಂದೂ ಸಂಸ್ಕೃತಿಯ ನೆರಳಿನಡಿಯಲ್ಲಿ ಸೃಷ್ಟಿಗೊಂಡಿದ್ದರೂ, ಕೇವಲ ಮುಸ್ಲಿಂ ಭಕ್ತರಿಗೆ ಮಾತ್ರವಲ್ಲದೆ ಅಸಂಖ್ಯಾತ ಹಿಂದೂ ಭಕ್ತರನ್ನೂ ಒಳಗೊಂಡಿದ್ದು, ಐತಿಹಾಸಿಕ ಹಾಗೂ ಧಾರ್ಮಿಕ ಸಮನ್ವಯಕ್ಕೆ ನಿದರ್ಶನವಾಗಿದೆ. ಇಸ್ಲಾಂ ಸಂತರ ಪ್ರಭಾವ ಪ್ರೇರಣೆಗಳಿಂದ

ಹಜರತ್ ಸಯ್ಯದ್ ಹಾಫೀಯ ಪೀರ ಸೂಫಿ ಸಂತರ ಪ್ರಭಾವ ಪ್ರೇರಣೆಗಳಿಂದ ಎರಡನೇ ಇಬ್ರಾಹಿಂ ಆದಿಲ್ ಶಾ ಪರಮತ ಸಹಿಷ್ಣುವಾಗಿದ್ದನಲ್ಲದೆ, 'ಜಗದ್ಗುರು ಷಾ' ಎಂದು ಕರೆಯಲ್ಪಡುತ್ತಿದ್ದನು. ಹಿಂದೂ ಪರಿಸರ, ಹಿಂದೂಧರ್ಮ, ಹಿಂದೂ ತತ್ವಜ್ಞಾನ, ಹಿಂದೂ ಸಂಸ್ಕೃತಿಗಳ ಪ್ರಭಾವದಿಂದ ರಾಜ್ಯವಾಳಿದ ಭಾರತದ ಮುಸ್ಲಿಂ ಸುಲ್ತಾನರಲ್ಲಿ ಮೊಗಲ್ ಚಕ್ರವರ್ತಿ ಅಕ್ಬರ್‌ನನ್ನು ಬಿಟ್ಟರೆ, ದಕ್ಷಿಣ ಭಾರತದಲ್ಲಿ ಬಿಜಾಪುರ ೨ ನೇ ಇಬ್ರಾಹಿಂ ಆದಿಲ್ ಷಾ ಇವನಿಗೆ ಸರಿಸಮನಾದ ಬಾದಶಾಹರೇ ಇರಲಿಲ್ಲ ಎಂಬುದು ಗಮನಾರ್ಹ ವಿಷಯ. ಸ್ವತಃ ಸಾಹಿತಿ ಮತ್ತು ಸಂಗೀತಗಾರನಾಗಿದ್ದ ೨ನೇ ಇಬ್ರಾಹಿಂ ಬಾದಶಾಹನು ದಖ್ಖನಿ ಉರ್ದುವಿನಲ್ಲಿ ರಚಿಸಿದ ಕಿತಾಬ್ ಎ ನವರಸ್‌ನಲ್ಲಿ ನರಸಿಂಹ, ಪಾರ್ವತಿ, ಸರಸ್ವತಿ, ಮೊದಲಾದವರ ಸ್ತೋತ್ರಗಳೊಂದಿಗೆ ಹಜರತ್, ಮಹಮ್ಮದ್ (ಸ) ಪೈಗಂಬರನನ್ನು ಕುರಿತು ಪ್ರಾರ್ಥನಾ ಗೀತೆಗಳಿವೆ.

ಇವನ ಅನ್ಯಧರ್ಮ ಸಹಿಷ್ಣುತೆಯನ್ನು ಕಂಡು ಕೆಲವು ಜನ ಅಸಮಾಧಾನಗೊಂಡರೆ ಕೆಲವು ಮುಸ್ಲಿಂ ಪ್ರಜೆಗಳು ಅವನನ್ನು ಜಗದ್ಗುರು ಎಂಬ ಹೆಸರಿನ ನಾಣ್ಯಗಳನ್ನು ಟಂಕಿಸಿ ''ಬಾಕಾ ನ್ಯಾರೊ ನ್ಯಾರೋಭಾವ್ಯ ಏಕ! ಕಹಾ ತುರಕ ಕಹಾ ಬರಹಮಾನ'' ಅರಸ ಭಾಷೆಗಳು ಬೇರೆ ಬೇರೆಯಾದರೂ ಭಾವ ಒಂದೇ, ತುರುಕ ಮತ್ತು ಬ್ರಾಹ್ಮಣ ಎಂಬ ಭೇದವೆಲ್ಲಿದೆ'' ಎಂದು ಪ್ರಶ್ನಿಸಿದನು. ಇವೆಲ್ಲವುಗಳನ್ನು ಪರಿಶೀಲಿಸಿದಾಗ ಮುಸ್ಲಿಂ ಅರಸರ ಕಾಲದಲ್ಲಿ ಹಿಂದೂ ಮುಸ್ಲಿಮರು ಸಾಮರಸ್ಯದಿಂದ ಕೂಡಿದ ಸಹಬಾಳ್ವೆಯನ್ನು ನಡೆಸುತ್ತಿದ್ದುದಕ್ಕೆ ಸಾಕಷ್ಟು ನಿದರ್ಶನಗಳು ದೊರೆಯುತ್ತವೆ (ಇಬ್ರಾಹಿಂ ೨೦೦೮: ೨೪೪).

ಹಜರತ್ ದಸ್ತಗಿರ್ ಹಾಫಿಮ್ ಫೀರ ಸಂತರ ಆಶೀರ್ವಾದದಿಂದ ಫಕೀರಸ್ವಾಮಿ ಅವತರಿಸಿದ ಎನ್ನುವ ಮಾತು, ಹಿಂದೂಗಳ ದೇವಾಲಯದಲ್ಲಿ ಬಾದಶಾಹ ಟಿಪ್ಪು ಸುಲ್ತಾನ ಇಟ್ಟಿರುವನೆಂದಿರುವ ಮೊಹರಂ ಪಂಜಾಗಳು, ಸಾವಳಗಿಯ ಶಿವಲಿಂಗೇಶ್ವರ ಮಠವು ಗುಲಬರ್ಗಾ ಹಜರತ್ ಖಾಜಾ ಬಂದೇನವಾಜ ಸಂತರ ಗದ್ದಿಗೆ ಹೊಂದಿರುವುದು ಹಿಂದೂ ಮುಸ್ಲಿಮರ ಭಾವೈಕ್ಯತೆಯ ಅಂಶವಾಗಿದೆ. ವಿವಿಧ ಪಂಥಗಳ ನಡುವೆ ಸಾಮರಸ್ಯವಿತ್ತೆಂಬುದನ್ನು ಬಲವಾಗಿ ಪ್ರತಿಪಾದಿಸಿದ ಶ್ರೀ ಕಪಟರಾಳ ಕೃಷ್ಣರಾವ್ ಅವರು ಹೀಗೆ ಸಮರ್ಥಿಸಿಕೊಳ್ಳುವುದುಂಟು. ''ಸೂಫಿ ಸಂತರನ್ನು ಹಿಂದೂಕರಣ ಹೆಸರುಗಳಲ್ಲಿ ಕರೆಯುವುದು, ಉದಾಹರಣೆಗೆ ಗುಲಬರ್ಗಾ ಬಂದೇನವಾಜನನ್ನು ಕೇಶವ ಚೈತನ್ಯ, ಆಳಂದ ಲಾಡ್ಲೆ ಮಶಾಯಿಕನನ್ನು ರಾಘವ ಚೈತನ್ಯ, ಮಾಯಿನಾಳದ ಶೇಖ್ ಶಾಹಾಬುದ್ದೀನನ್ನು ಬಾಬಾ ಚೈತನ್ಯ ಹಾಗೂ ಬುರ್ಹಾನಪುರದ (ಅಕ್ಕಲಕೋಟೆ) ಶೇಖ ಅಲ್ಲಾವುದ್ದೀನನನ್ನು ಅನಂತ ಚೈತನ್ಯ ಎಂದು ಕರೆಯುತ್ತಿದ್ದುದನ್ನು ಕಾಣಬಹುದಾಗಿದೆ. ಇದು ಸಹ ಒಂದು ರೀತಿಯ ಹಿಂದೂ ಇಸ್ಲಾಂ ಪಥಗಳ ಸಾಮರಸ್ಯವೆನ್ನಬಹುದು (ತರೀಕೆರೆ ೨೦೦೮: ೫೨).

''ದೋಸ್ತರಾ ಕೀ ದೀನ್'' ಅಂದರೆ ''ಆಧ್ಯಾತ್ಮಿಕ ಗೆಳೆತನ'' ಎಂದರ್ಥ. ಇದನ್ನು ಗುರುವಿನ ಹೆಸರಿನಲ್ಲಿ ಜಗಾಯಿಸಲಾಗುತ್ತದೆ. ಸಾವಳಗಿಯ ಶಿವಲಿಂಗ, ಶಿರಹಟ್ಟಿಯ ಫಕೀರೇಶ್ವರ, ವಡವಾಳದ ನಾಗನಾಥನ, ಕೊಡೇಕಲ್ ಬಸವಣ್ಣ, ಉಳವಿಯ ಚೆನ್ನಬಸವೇಶ್ವರ ಗುಲಬರ್ಗಾದ ಹಜರತ್ ಸಯ್ಯದ್ ಸಿದ್ದಿಕ್ ಹುಸೇನ್ ಈ ಮೊದಲಾದವರ ಜಾತ್ರೆ ಹಾಗೂ ಉರುಸುಗಳಲ್ಲಿ ಹಜರತ್ ಖಾಜಾ ಬಂದೇನವಾಜ್ ಅತಿ ಪ್ರಸಿದ್ಧಿ ಹೊಂದಿದರು.

ಹಜರತ್ ಖಾಜಾ ಅಮೀನ್ ಹಾಗೂ ಹಜರತ್ ನಾಸಿರುದ್ದೀನ್ ಚಿರಾಘ್ ಹಾಗೂ ಶ್ರೀ ಚೆನ್ನಬಸವೇಶ್ವರ ಹೆಸರುಗಳಿಂದ ದೀನ್ ಹಾಕುವುದನ್ನು ಕೇಳಿದಾಗ ಹಿಂದೂ ಸ್ವಾಮಿಗಳಿಗೆ ಸೂಫಿ ಸಂತರು ಗುರುಗಳು, ಮಾರ್ಗದರ್ಶಕರು ಆಗಿದ್ದುದು ತಿಳಿದು ಬರುವುದು. ವಡವಾಳ(ಸೊಲ್ಲಾಪುರ)ದ ನಾಗನಾಥ ಜಾತ್ರೆಯಲ್ಲಿ ಹಜರತ್ ನಾಸಿರುದ್ದೀನ್ ಚಿರಾಘ್ ಕಿ ದೋಸ್ತರಾಕಿ ದೀನ್ ಹರಹರಾ ಎಂದು ದೀನ್ ಹಾಕದಿದ್ದರೆ ನಾಗನಾಥ ಪಲ್ಲಕ್ಕಿ ಏಳುವುದಿಲ್ಲವೆಂಬ ನಂಬಿಕೆಯುಂಟು(ಪಡಶೆಟ್ಟಿ ೧೯೯೦: ೧೮೭).

ಸೂಫಿ ಸಂತರ ಉರುಸುಗಳಲ್ಲಿ ಹಿಂದೂಗಳು ಭಾಗವಹಿಸುವಂತೆ ಹಿಂದೂ ಧರ್ಮದ ಜಾತ್ರೆಗಳಲ್ಲಿ ಮುಸ್ಲಿಮರು ಪಾಲ್ಗೊಂಡು ದೇವರಿಗೆ ಭಕ್ತಿಯನ್ನರ್ಪಿಸುವುದನ್ನು ಸ್ವಾಮಿಗಳಿಗೆ ಕಾಣಿಕೆಗಳನ್ನು ನೀಡುವುದನ್ನು ಕಾಣಬಹುದಾಗಿದೆ. ಇದಕ್ಕೆ ಅತ್ಯುತ್ತಮ ನಿದರ್ಶನವೆಂದರೆ ಕೊಡೇಕಲ್ ಬಸವಣ್ಣನ ಜಾತ್ರೆಯಲ್ಲಿ ಅದರ ಮೇಲೆ ತೂಗು ಹಾಕಿರುವ ಗಾಜಿನ ಹಂಡೆಗಳಲ್ಲಿ ಇಸ್ಲಾಮದ ಮೂಲ ಮಂತ್ರ ''ಲಾ ಇಲಾಹ ಇಲ್ಲಲಾಹ ಮುಹಮ್ಮದ್‌ರ್ರ್‌ಸೂಲಿಲ್ಲ'' ಅಂದರೆ ದೇವರೊಬ್ಬನೆ, ಅವನನ್ನು ಬಿಟ್ಟು ಅನ್ಯ ದೇವರಿಲ್ಲ. ಮಹಮ್ಮದರು ಅವನ ಪ್ರವಾದಿಯೆಂದು ಕೆತ್ತಲಾಗಿದೆ ಇನ್ನೂ ಅನೇಕ ಜಾತ್ರೆಗಳಲ್ಲಿ ಹಿಂದೂ ಮುಸ್ಲಿಂ ಭಕ್ತರು ಸೇರಿ ಆಚರಣೆಗಳಲ್ಲಿ ಪಾಲ್ಗೊಳ್ಳುತ್ತಿರುವುದು ಪರಸ್ಪರ ಭಾವೈಕ್ಯತೆಯ ಸಂಕೇತಗಳಾಗಿವೆ (ಸೊಪ್ಪಿಮಠ ೧೯೮೮: ೪೯೦).

೩. ಜಾನಪದ ನೆಲೆಯಲ್ಲಿ ಸಾಮರಸ್ಯ

ಹೈದರಾಬಾದ್ ಕರ್ನಾಟಕ ಪ್ರದೇಶದ ಜಾನಪದವು ತನ್ನದೇ ಆದ ವೈಶಿಷ್ಟ್ಯತೆಗಳಿಂದ ಕೂಡಿದೆ. ಇಲ್ಲಿಯ ಹರದೇಶಿ-ನಾಗೇಶಿ ಲಾವಣಿಗಳು, ಸಂಪ್ರದಾಯದ ಹಾಡುಗಳು, ಹಂತಿಯ ಹಾಡುಗಳು, ಬೀಸುವ-ಕುಟ್ಟುವ ಹಾಡುಗಳು, ವೀರಗಾಸೆ ಕುಣಿತ, ಬಿದರಿ ಕಲೆ, ನಂದಿಕೋಲು ಕುಣಿತ, ಚಿಟಕಿ ಭಜನೆ, ಕೋಲಾಟ, ರಿವಾಯತ್-ಮೊಹರಂ ಪದಗಳು ಭಜನೆ ಹಾಡುಗಳು, ನೇಗಿ ಹಾಡುಗಳು, ಬುಲಾಯಿ ಹಾಡುಗಳು, ಸಣ್ಣಾಟಗಳು, ರಜಾಕಾರರ ಲಾವಣಿ ಮುಂತಾದವು ಈ ಭಾಗದ ಜಾನಪದದ ಅನನ್ಯತೆಗಳಾಗಿದ್ದು ಇವತ್ತಿಗೂ ಮುಂದುವರಿದುಕೊಂಡು ಬಂದಿವೆ. ಮುಸ್ಲಿಂ ಜನಪದರು ಕನ್ನಡವನ್ನು ಬಳಸಿಕೊಂಡು ಜನಪದ ಸಾಹಿತ್ಯ ಸೃಷ್ಟಿಸಿರುವುದು ವಿಶೇಷ ಸಂಗತಿ. ಮೂಲಕ ಕನ್ನಡ ಭಾಷೆ ಹಾಗೂ ಜನಪದ ಸಾಹಿತ್ಯದ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿರುವುದು ಗಮನಿಸಬೇಕಾದ ಸಂಗತಿಯಾಗಿದೆ. ಚೆನ್ನೂರಿನ ಜಲಾಲ ಸಾಹೇಬ, ಮಹಾಗಂವ ಮೀರಸಾಬ, ಕೊಳ್ಳೂರು ಹಾಸನ್ ಸಾಬ, ಬೆನೂರಿನ ಭವಾನಸಿಂಗ್, ತಾಡಂತಯ ತಾಡಮದನಸಾ, ಸಾವಳಗಿಯ ಮೊಹಮ್ಮದ ಸಾಬ, ಮಂಗಲಗಿಯ ನನ್ನಸಾಬ, ರೋಣದ ಹೈದರಾಲಿ, ಕಾಳಗಿ ಮಶಾಕ ಸಾಬ, ದೇವಗಾಂವದ ಹಜರತ್‌ಸಾಬ, ಭೈರಾಮಡಗಿಯ ಹೈದರಸಾಬ ಮುಂತಾದವರು ಲಾವಣಿ ಹಾಗೂ ತತ್ವಪದಕಾರರ ಸಾಹಿತ್ಯವನ್ನು ಅವಲೋಕಿಸಬಹುದು. ಅವರ ತತ್ವಪದಗಳ ಹಿಂದಿನ ನಿಗೂಢ ರಹಸ್ಯವನ್ನು ಸತ್ಯತೆಯ ಬೆಳಕನ್ನು ಜನಸಾಮಾನ್ಯರಲ್ಲಿಗೆ ತಲುಪಿಸುವ ಕಾರ್ಯಗಳಲ್ಲಿ ಇಂದಿನ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಜಾನಪದ ಅಧ್ಯಯನಕ್ಕೆ ಅಸ್ತಿ ಭಾರವನ್ನು ಹಾಕಿದ ಶ್ರೇಯಸ್ಸು ಬಿ.ಬಿ. ಹೆಂಡಿಯವರಿಗೆ ಸಲ್ಲುತ್ತದೆ. ಅನೇಕ ಕರ್ನಾಟಕ ಜಾನಪದ ಕ್ಷೇತ್ರದಲ್ಲಿ ವಿಶೇಷವಾದ ಅಧ್ಯಯನವನ್ನು ಮಾಡಿರುವಂತೆ ವಿದ್ವಾಂಸರುಗಳಾದ ಎಂ.ಎಸ್. ಲಠ್ಠೆ,

ವಿರಣ್ಣ ದಂಡೆ, ಬಿ.ಎಸ್. ಪೋಲಿಸ ಪಾಟೀಲ. ಡಿ.ಬಿ. ನಾಯಕ, ಜಯಶ್ರೀ ಗಾಯಕವಾಡ ಮತ್ತು ವಾಲಿಕಾರ ಚೆನ್ನಣ್ಣರವರಂತಹ ವಿದ್ವಾಂಸರು ಗುಲಬರ್ಗಾ ಪ್ರದೇಶದಲ್ಲಿ ವಾಸವಾಗಿದ್ದು ಅಲ್ಲಿನ ಸಂಸ್ಕೃತಿಯ ನೆಲೆಯನ್ನು ಉದಾರ ಮನಸ್ಸಿನಿಂದ ಕೊಂಡಾಡಿದ್ದರು (ಭಾಸ್ಕರ್ ೨೦೦೫: ೨೦೦).

ಹಿಂದೂ ಮುಸ್ಲಿಮರು ಒಂದುಗೂಡಿ ಮೊಹರಂ ಹಬ್ಬವನ್ನು ಆಚರಿಸುತ್ತಿರುವುದು ಜನಜನಿತ. ಹಬ್ಬದ ಸಂದರ್ಭದಲ್ಲಿ ಹವ್ಯಾಸಕ್ಕೆ ಹುಲಿವೇಷವನ್ನು ಜಾತಿಭೇದವಿಲ್ಲದೆ ಹಾಕುತ್ತಾರೆ. ಅಲಾಯಿಕುಣಿತದಲ್ಲಿ ಭಾಗವಹಿಸುವುದರಿಂದ ಇದನ್ನೇ ಹೆಜ್ಜೆಮೇಳವೆಂದು ಕರೆಯುತ್ತಾರೆ. ಹಬ್ಬ ಆರಂಭದಿಂದ ಹಿಡಿದು ಕೊನೆಯವರೆಗೂ ಹಿಂದೂ-ಮುಸ್ಲಿಮರು ಎಲ್ಲ ರೀತಿಯಲ್ಲಿ ಪಾಲ್ಗೊಳ್ಳುತ್ತಾರೆ. ಹಜರತ್ ಹಸನ್ ಮತ್ತು ಹುಸೇನ್‌ರ ಪುಣ್ಯಸ್ಮರಣೆಗಾಗಿ ಹಬ್ಬವನ್ನು ಆಚರಿಸಿ, ಪರಸ್ಪರ ಸೌಹಾರ್ದತೆ ಶಾಂತಿಯ ಸಂದೇಶ ಸಾರುವುದಕ್ಕಾಗಿ ಈ ಕುಣಿತಗಳು ನಡೆಯುತ್ತವೆ. ಮುಸ್ಲಿಂ ಕವಿಗಳಾದ ಬಾಗಲಕೋಟೆಯ ಹುಸೇನ್‌ಮೀಯಾ ಮತ್ತು ದಸ್ತಗಿರಿ, ರಾಮದುರ್ಗದ ರಾಜಮಟ್ಟದ ಇವರು ಕನ್ನಡದಲ್ಲಿ ಹಾಡುಗಳನ್ನು ಬರೆದು ಭಾಷಾ ಸೌಹಾರ್ದತೆಗೆ ನಾಂದಿ ಹಾಡಿದ್ದಾರೆ. ಗುಲ್ಬರ್ಗಾ ಜಿಲ್ಲೆಯ ವಾಡಿ ಗ್ರಾಮದ ಪಕ್ಕದಲ್ಲಿರುವ ಲಾಡ್ಲಪುರವು ಸೌಹಾರ್ದತೆಯ ತಾಣವಾಗಿರುವುದನ್ನು ಅಲ್ಲಿಯ ಗ್ರಾಮದೇವತೆಯ ಆಚರಣೆಯಿಂದ ಕಂಡುಕೊಳ್ಳಬಹುದು. ರಾಯಚೂರು ಜಿಲ್ಲೆಯ ಬಹುತೇಕ ಹಳ್ಳಿಗಳಲ್ಲಿರುವ ಗೋಕುಲಸಾಬ ಗೋಕುಲಸ್ವಾಮಿ ಎಂಬ ಗ್ರಾಮದೇವತೆಯ ಆಚರಣೆಯಿಂದಲೂ ಕಾಣಬಹುದಾಗಿದೆ. ಹಿಂದೂ ಮುಸ್ಲಿಮರು ಅವರಿವರ ಧಾರ್ಮಿಕ ವಿಧಿ ವಿಧಾನಗಳಿಗನುಸಾರವಾಗಿ ಉತ್ಸವವನ್ನು ಆಚರಿಸುತ್ತಾರೆ. ಇಲ್ಲಿ ಯಾವುದೇ ಪ್ರತಿಷ್ಠೆಯ ಪ್ರಶ್ನೆಯೇ ಉದ್ಭವಿಸದು. ಜನಪದ ಸಮಾಜಕ್ಕೆ ಗಂಡು ಹೆಣ್ಣು ದೈವಗಳ ವ್ಯತ್ಯಾಸದ ಆಚರಣೆ ದೃಷ್ಟಿಕೋನವಿಲ್ಲ ಎಂಬುದಕ್ಕೆ ಮೌಲಾರಿ ಗುಲಬರ್ಗಾ ಜಿಲ್ಲೆಯ ಮಾನೆಗುಂದಿಯ ಗ್ರಾಮ ದೈವಗಳಾದ ಮತ್ತು ಮಾಣಿಕ್ಯಂನವರನ್ನು ಉದಾಹರಣೆಯಾಗಿ ಕೊಡಬಹುದು. ಭಜನೆ ಹಾಡುಗಳಲ್ಲಿ ಹಿಂದೂ ಮುಸ್ಲಿಮರು ಮಾತ್ರವಲ್ಲದೆ ವಿವಿಧ ಕೋಮಿನವರೂ ಭಜನೆಯಲ್ಲಿ ಭಾಗವಹಿಸುತ್ತಾರೆ. ಇಲ್ಲಿಯ ಪಠ್ಯವಸ್ತು ಸಹ ಒಂದೇ ಭಾಷೆ, ಒಂದೇ ವಸ್ತು, ಏಕದೇವತಾರಾಧನೆಯಿಲ್ಲ. ಮುಸ್ಲಿಮರು ಕನ್ನಡ ಹಾಡುಗಳನ್ನು ರಚಿಸಿದರೆ ಹಿಂದೂಗಳು ಉರ್ದು ಮತ್ತು ಹಿಂದಿ ಮಿಶ್ರಿತ ಹಾಡುಗಳನ್ನು ಬರೆದು ಭಾಷಾ ಬಾಂಧ್ಯವ್ಯವನ್ನು ಮೆರೆದಿದ್ದಾರೆ.ನಿಜಾಮ ಆಡಳಿತದಲ್ಲಿ ಅಕ್ಷರಾಭ್ಯಾಸ ಕಲಿತಿರುವುದರಿಂದಲೇ ಶ್ರೀ ಶಾಂತರಸ, ಹಕಾರಿಯಂತಹ ಭ್ರಾತೃತ್ವದ ಉರ್ದು ಗಜಲ್‌ಗಳ, ಶಾಹೀರ್‌ಗಳ ಕಾವ್ಯಲಹರಿಯನ್ನು ಹರಿಸಿದ್ದಾರೆ. ಹಲವಾರು ವಿಷಯಗಳಲ್ಲಿ ಕೋಮು ಸೌಹಾರ್ದತೆಯಿಂದ ಸಹಬಾಳ್ವೆ ಮಾಡುತ್ತಿರುವ ಜನತೆಗೆ ಇತ್ತೀಚಿನ ದಿನಗಳಲ್ಲಿ ಗ್ರಾಮೀಣ ಭಾರತದ ಮನಸ್ಸನ್ನು ದೇಶದ ಮೂಲಭೂತವಾದಿಗಳ ಶಕ್ತಿ, ವಿದೇಶಿ ಶಕ್ತಿಗಳು ಹಿಂಸೆಯ ಹಾದಿ ಹಿಡಿಸಿ ಪ್ರಚೋದಿಸುತ್ತಿರುವುದು ಶೋಚನೀಯ ಸಂಗತಿ (ಪೋತೆ ೨೦೦೦: ೧೧೫,೧೧೭,೧೧೮,೧೧೯,೧೨೦).

ಗುಲಬರ್ಗಾ ನಾಡಿನಲ್ಲಿ ಸಾಮರಸ್ಯದ ವಿಷಯ ಕುರಿತು ಚರ್ಚೆ ಕೈಗೊಳ್ಳುವಾಗ ಬಂದೇನವಾಜರ ಪಾತ್ರ ಅತ್ಯಂತ ವೈಶಿಷ್ಟ್ಯತೆಯಿಂದ ಕೂಡಿದೆ ಎನ್ನಬಹುದು. ಉತ್ತರ ಭಾರತದಿಂದ ದಕ್ಷಿಣದತ್ತ ಬಂದು ತಮ್ಮ ವಿದ್ವತ್ತಿನ

ಮುಖಾಂತರ ಅಂದಿನ ಬಹಮನಿ ಸಾಮ್ರಾಜ್ಯದ ಸುಲ್ತಾನನ ಮನವೊಲಿಸಿ ಮತ್ತು ಆತನನ್ನು ತನ್ನ ಶಿಷ್ಯನಾಗಿ ಮಾಡಿಕೊಂಡಿದ್ದು ಮತ್ತು ಆ ಸಾಮ್ರಾಜ್ಯದಲ್ಲಿಯೇ ನೆಲೆ ನಿಂತನು. ಬಂದೇನವಾಜರು ಹಿಂದೂ ಮುಸ್ಲಿಮರು ಈ ನೆಲದಲ್ಲಿ ಕೂಡಿ ಬಾಳಬೇಕಿದೆ, ಬದುಕಬೇಕಿದೆ ಎನ್ನುವ ಸೌಹಾರ್ದತಯುತ ಚಿಂತನೆ ಅತ್ಯಂತ ಶ್ಲಾಘನೀಯವಾಗಿದೆ. ಆ ಕಾಲದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಇದೊಂದು ದಿಟ್ಟ ಹೆಜ್ಜೆ. ಇವರು ಹಾಗೂ ಇವರ ಶಿಷ್ಯ ಪರಂಪರೆಯಲ್ಲಿ ಹಿಂದೂ ಧರ್ಮದ ಪ್ರಭಾವವು ಮೂಡಿ ನಿಂತು ಚೈತನ್ಯ ಸಂಪ್ರದಾಯವೊಂದು ಮೆಟ್ಟಿ ನಿಂತಿತ್ತು. ಬಂದೇನವಾಜರನ್ನು 'ಕೇಶವ ಚೈತನ್ಯ' ಎಂದು ಕರೆಯುವ ವಾಡಿಕೆಯೂ ಉಂಟು. ಇವರ ಗುರುಬಂಧು ಸಿದ್ಧಲಿಂಗ ಎಂಬ ಕವಿ ಬರೆದ ತತ್ವಜ್ಞಾನದ ಗ್ರಂಥವೊಂದು ದೊರಕಿದ್ದು ಈ ದಿಶೆಯಲ್ಲಿ ಹೊಸ ಗೇಸೂದರಾಜ್ ಎಂಬ ಗ್ರಂಥದಲ್ಲಿ ವಿಸ್ತರಿಸಲಾಗಿದೆ.

ಬಂದೇನವಾಜರ ಶಿಷ್ಯ ಪರಂಪರೆ ಭಾರತದ ತುಂಬಾ ಹರಡಿಕೊಂಡಿತ್ತು. ಅದು ಮಹಾರಾಷ್ಟ್ರದ ಸಂತಕವಿ ಏಕನಾಥ ಎಂಬುವರ ಸಂತನಲ್ಲಿಗೆ ಬೆಳೆದುಕೊಂಡು ಬಂದುದು ತಿಳಿದುಬರುತ್ತದೆ. ಕರ್ನಾಟಕದಲ್ಲಿಯೂ ಆಳಂದ, ಮಾಯಿನಾಳ, ಮಿಡನಾಳ, ಬೀದರ್, ಸಾವಳಗಿಯ ಶ್ರೀ ಶಿವಲಿಂಗೇಶ್ವರ ಮಠದಲ್ಲಿ ಇಂದಿಗೂ ಬಂದೇನವಾಜ ಕೀ ದೊಸ್ತರಾ ಹೋದೀನ್ ಎಂದು ದೀನ್ ಜಗಾಯಿಸುತ್ತಾರೆ. ಕೊಮು ಸೌಹಾರ್ದತೆಯನ್ನು ಕಾಪಾಡುವವರು ಧರ್ಮದ ಗುರುಗಳು, ಸೂಫಿ ಸಂತರುಗಳು, ಪಾದ್ರಿಗಳು ಈ ಪೀಠದಲ್ಲಿರುವವರು ಸ್ವಲ್ಪ ಏರು ಪೇರಾಗಿ ನಡೆದುಕೊಂಡರೂ ಸಮಾಜ ಛಿದ್ರಛಿದ್ರವಾಗಿ ಹೋಗುತ್ತದೆ ಎಂಬ ಪರಿಭಾವನೆಯು ಬಂದೇನವಾಜರಲ್ಲಿದ್ದುದು ಅವರು ಸ್ನೇಹದಿಂದ ಕಾಣುವ ಸಮಭಾವ ಹಾಗೂ ಧರ್ಮ ಸಮನ್ವಯತೆಯ ಪ್ರತೀಕ (ಕರದಳ್ಳಿ, ೨೦೦೮: ೪೦-೪೧) ಎಂದು ಕರದಳ್ಳಿಯವರು ವಿಶ್ಲೇಷಣೆಯನ್ನು ಮಾಡಿದ್ದು ಸತ್ಯತೆಯಿಂದ ಕೂಡಿದೆ. ಆದುದರಿಂದಲೇ ಹಿಂದೂ ಜನಗಳು ಬಂದೇನವಾಜರನ್ನು ಇಂದಿಗೂ ಪೂಜ್ಯಭಾವನೆಯಿಂದ ಆರಾಧಿಸುತ್ತಿದ್ದು ಮತ್ತೆ ಮತಧರ್ಮದ ಸೇತುವೆ ಏಕತೆಯ ಸಾಮರಸ್ಯದ ದ್ಯೋತಕವೆಂದು ಪರಿಗಣಿಸಲಾಗುತ್ತದೆ. ಕರ್ನಾಟಕದ ಅನೇಕ ಅನುಭವಿ ಸಂಪ್ರದಾಯಗಳಲ್ಲಿ ಗುರುಶಿಷ್ಯರ ಹಾಗೂ ಸ್ನೇಹಿತರ ಸಂಬಂಧಗಳು ಧಾರ್ಮಿಕವಾಗಿ ಅನ್ಯ ಎನ್ನಲಾಗುತ್ತದೆ. ನಾಸಿರುದ್ದೀನ್-ಸಿದ್ಧಲಿಂಗ, ಬಂದೇನವಾಜ್-ಶರಣಬಸವೇಶ್ವರ; ಮುರ್ತುಜಾ ಖಾಜಾದ್ರಿ-ಮಹಾಂತ ಶಿವಯೋಗಿ; ಕೊಡೇಕಲ್ ಹುಸೆನಫೀರಾ-ನಾಗಲಿಂಗಸ್ವಾಮಿ, ಶೇಕ್ ಶಾವಲಿ-ಗಾದಿಲಿಂಗ; ತುರಾಸಾಹೇಬ-ನಿಡುವಂಚಿ ಭದ್ರೇಶ್ವರ ಅನೇಕ ಜೋಡಿಗಳು ಕಾಣಸಿಗುತ್ತವೆ. ಈ ಸಂತರ ಗೆಳೆತನಗಳು ಸಾಮಾನ್ಯವಾಗಿ ಶಕ್ತಿಪರೀಕ್ಷೆಯ ನಂತರವೇ ಉಂಟಾಗಿವೆ. ಸಾವಳಗಿಯ ಶಿವಲಿಂಗನು ಸ್ಪರ್ಧೆಯಲ್ಲಿ ಗೆದ್ದು ಬಂದೇನವಾಜರನಿಂದ ಶೈಲಿ ಶಮಲ ಪಡೆದುದು ನಿದರ್ಶನವಾಗಿದೆ. ಅಲ್ಲದೇ ಸೂಫಿ ಸಂತರಿಗೆ ಅವರ ವಾಸಕ್ಕಾಗಿ ಸಾಮಾನ್ಯ ಭಕ್ತರ ಭೇಟಿಗಾಗಿ 'ಖಾನಖಾ' ಎಂಬ ಮಠವನ್ನು ನಿರ್ಮಿಸಿದ್ದರು ಮತ್ತು ಅದರ ವೆಚ್ಚಕ್ಕಾಗಿ ಕೆಲವು ಇನಾಮು ಜಹಗೀರು ಇರುತ್ತಿದ್ದವು. ಅದರಂತೆ ಮಠಗಳೂ ಜಹಗೀರ್ ಹೊಂದಿರುತ್ತಿದ್ದವು.

೪. ಇಂಡೋ-ಸಾರ್ಸೆನಿಕ್ ರಚನೆ ಮಠಗಳು

ಹಿಂದೂ-ಮುಸ್ಲಿಮರಲ್ಲಿ ಸಾಮರಸ್ಯದ ನೆಲೆಗೆ ಪುಷ್ಟಿಯೆಂಬಂತೆ ದರ್ಗಾ ಗದ್ದಿಗೆಗಳ ವಾಸ್ತುರಚನೆ ಸೂಫಿ ಕರಣಕ್ಕೆ ಒಳಗಾದ ಸಂತರ ಸಮಾಧಿಗಳು ಹಾಗೂ ಮಠಗಳು 'ಇಸ್ಲಾಮಿಕ್' ಎಂದು ಕರೆಯಲಾಗುವ ಇಂಡೋ-

ಸಾರ್ಸೆನಿಕ್ ರಚನೆಯನ್ನು ಪಡೆದುಬಿಟ್ಟಿವೆ. ಈ ವಾಸ್ತುವಿನಲ್ಲಿರುವ ಕರ್ನಾಟಕದ ರಚನೆಗಳೆಂದರೆ ಸಾವಳಗಿ ಶಿವಯೋಗಿ, ತಿಂಥಿಣಿ ಮೋನಪ್ಪ, ಶಿರಹಟ್ಟಿ ಫಕೀರಸ್ವಾಮಿ, ಕೊಡೇಕಲ್ ಬಸವಣ್ಣ, ದಿಗ್ಗಿ ಸಂಗಮನಾಥ, ಸಾಲೋಟಗಿ ಮಾಡ್ಯಳದ ಅಲ್ಲಮಪ್ರಭು ಹಾಗೂ ಗದ್ದನಕೇರಿ ಮಳೇಪ್ಪಯ್ಯ ಅವರ ಗದ್ದುಗೆ-ಗುಡಿ ಮುಂತಾದವು ಕೆಲವು ಕಡೆಗೆ ಗೆಳೆಯನೋ ಗುರುವೋ ಆದ ಸೂಫಿಯ ತೋರುಗದ್ದಿಗೆ ಮೇಲಿದ್ದು, ಕೆಳಗೆ ಬಂದೇನವಾಜ್, ಮೋನಪ್ಪಯ್ಯನ ಮೇಲೆ ಮಹಮ್ಮದ್ ಪೈಗಂಬರ್ ಅವರ ತೋರುಗದ್ದುಗೆಗಳು ಇವೆ. ಬಹುಮನಿಗಳ ಕಾಲದ ಎಲ್ಲ ಸೂಫಿಗಳು ದರ್ಗಾಗಳಲ್ಲಿ, ಅದರಲ್ಲೂ ಬಾಗಿಲ ಚೌಕಟ್ಟುಗಳಲ್ಲಿ 'ಹಿಂದೂ ವರ್ಕ್‌ಮನ್‌ಶಿಪ್' ಇರುವುದನ್ನು ಯಜ್ದಾನಿಯವರು ಗುರುತಿಸುತ್ತಾರೆ. ಸೂಫೀಕರಣ ಹೊಂದಿದ ಸಂತರು ಈಗ ಗುರುಪೀಠ ಏರುವ ವ್ಯಕ್ತಿಗಳು ಹಸಿರು ಪೇಟ ಶೇರ್ವಾನಿ ಪಾಯಿಜಾಮ ವೇಷವನ್ನು ಧರಿಸುತ್ತಾರೆ(ತರಿಕೇರೆ ೨೦೦೮: ೭೯-೮೧).

ಗ್ರಾಮೀಣ ಪ್ರದೇಶದ ಕೆಲವು ಭಾಗಗಳಲ್ಲಿ ಇಂದಿಗೂ ಸಮಾಜದಲ್ಲಿ ವರ್ಗಗಳ ನಡುವೆ ಕೆಲವು ಧಾರ್ಮಿಕ ಅಂಶಗಳ ನಿರ್ಬಂಧಗಳಿರುವುದು ಸರ್ವೇಸಾಮಾನ್ಯ. ನಮ್ಮ ದೇಶ ಸಾಮಾಜಿಕ ಮತ್ತು ಆರ್ಥಿಕ ನೆಲೆಯಲ್ಲಿ ಉನ್ನತಮಟ್ಟದಲ್ಲಿ ಮುನ್ನಡೆಯುತ್ತಿದ್ದರೂ, ಕೆಲವು ಹಳ್ಳಿಗಳಲ್ಲಿ ಕೆಲವು ನಿರ್ಬಂಧಗಳಿಗೂ ಕಾರಣವಾಗಿವೆ. ಸಮಾಜದಲ್ಲಿರುವ ಉತ್ತಮವರ್ಗದವರು ಇನ್ನೂ ಹಳ್ಳಿಗಳಲ್ಲಿ ಕೆಲವು ಕಟ್ಟುಪಾಡುಗಳನ್ನು ವಿಧಿಸಿರುವುದು, ಆದರೆ ಇನ್ನೂ ಪರ್ಯಾಯವಾಗಿ ನಗರ ಜಾತ್ರೆಗಳಲ್ಲಿ ಯಾವುದೇ ನಿರ್ಬಂಧನೆಗಳಿರುವುದನ್ನು ಕಾಣುವುದಿಲ್ಲ. ಸ್ತ್ರೀದೈವಗಳ ಮತ್ತು ಪುರುಷದೈವವನ್ನು ಜಾತ್ರೆಗಳಲ್ಲಿ ಸಮಾಜದ ಸ್ತ್ರೀಪುರುಷ ಮಕ್ಕಳು, ವೃದ್ಧ, ವೃದ್ಧೆಯರು ಪಾಲ್ಗೊಂಡು ಅನೇಕ ವಿಧಿ ವಿಧಾನಗಳಲ್ಲಿ ಸಾರ್ವತ್ರಿವಾಗಿ ಹಬ್ಬ, ಜಾತ್ರೆ, ಉರುಸ್, ತೇರು ಆಚರಣೆಯಲ್ಲಿ ಭಾಗಿಗಳಾಗಿ ಆಚರಿಸುವುದನ್ನು ಇಂದು ಕಾಣಬಹುದಾಗಿದೆ (ನಾಗೇಶ್ ೨೦೧೧: ೪೨).

ಭಾರತೀಯ ಸಂಸ್ಕೃತಿಗಳ ಸಮನ್ವತೆಯ ನೆಲೆಯಲ್ಲಿ ಯೋಚಿಸುವುದಾದರೆ ಒಂದೊಂದು ಜನಾಂಗದ ಸಂಸ್ಕೃತಿಯೂ ತನ್ನದೇ ಆದ ಮೌಲ್ಯವನ್ನು ಹೊಂದಿದೆ. ಆದುದರಿಂದ ಎಲ್ಲಾ ಸಂಸ್ಕೃತಿಗಳಲ್ಲಿ ಅಪಾರವಾದ ನಂಬಿಕೆ, ನಂಟು ಇರುವುದರಿಂದ ಜಾತ್ರೆಗಳು ಆಕರ್ಷಣೆಯಾಗುತ್ತಾ ಆಚರಿಸಿಕೊಂಡು ಬರಲಾಗುತ್ತಿದೆ (ಶಿವಕುಮಾರಸ್ವಾಮಿ ೧೯೮೮: ೮೧).

ಜಾತ್ರೆಗಳು ಕೇವಲ ಧಾರ್ಮಿಕ ತಾಣವಾಗಿರದೆ ಸಾಮಾಜಿಕ ಮತ್ತು ಆರ್ಥಿಕ ವ್ಯಾಪಾರದ ತಾಣಗಳೂ ಆಗಿವೆ. ಸಮಾಜವೆಂದ ಮೇಲೆ ಅದು ಸಂಸ್ಕೃತಿಯ ಕೇಂದ್ರವೂ ಆಗಿರುತ್ತದೆ. ಸಮಾಜ ಎಲ್ಲವನ್ನು ಒಳಗೊಂಡಿರುತ್ತದೆ. ಇತ್ತೀಚೆಗೆ ಆಧುನಿಕತೆಯ ಹೊಸ್ತಿಲಿನಲ್ಲಿ ಸಾಂಪ್ರದಾಯಿಕ ಆಚರಣೆಗಳಲ್ಲಿ ಮನುಷ್ಯನ ಪಾಲುದಾರಿಕೆ ಇಲ್ಲ. ಭಾಗಿಯಾಗುವಿಕೆಯಲ್ಲಿ ವೈವಿಧ್ಯಮಯ ರೂಪದಲ್ಲಿರುತ್ತದೆ ಎಂದು ಅನ್ನಿಸುತ್ತದೆ. ಇತ್ತೀಚೆಗೆ ಗಮನಿಸಿದಾಗ ಜಾತ್ರೆಯಲ್ಲಿ ಲಕ್ಷಕ್ಕೂ ಮೀರಿ ಮೀರಿ ಜನಪದರು ಸೇರುವರು. ಜಾತ್ರೆಗಳಿಗೆ ಊರಿನವರು, ಅಕ್ಕಪಕ್ಕದ ಗ್ರಾಮಸ್ಥರು, ಪಟ್ಟಣ್ಣವಾಸಿಗಳು ಬರುವರು ಎಂಬುದನ್ನು ತಿಳಿದುಕೊಂಡು ತಮ್ಮ ಉದ್ದೇಶ ಈಡೇರಿಕೆಗಾಗಿ ತೆರಳುವುದು ಕಂಡುಬರುತ್ತದೆ.

ಜಾಗತೀಕರಣದ ನಿಟ್ಟಿನಲ್ಲಿ ಬಹುತೇಕ ಜಾತ್ರೆಗಳಲ್ಲಿ ತೆಂಗಿನಕಾಯಿ ಮಾರುವುದರಿಂದ ಹಿಡಿದು ವಸ್ತುಗಳ ಕೊಳ್ಳುವಿಕೆಯ ವ್ಯವಹಾರದ ತಾಣಗಳಾಗಿ ಪರಿಣಮಿಸಿವೆ. ಜಾತ್ರೆಗಳು ಯಾವ ಊರುಗಳಲ್ಲೇ ನಡೆಯಲಿ ಅವು ಜರಗುವ ಆಸುಪಾಸಿನಲ್ಲಿ ಬಹುತೇಕವಾಗಿ ವ್ಯಾಪಾರಸ್ಥರು ಹಣ ಗಳಿಸಿಕೊಳ್ಳುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಕಾಣಸಿಗುತ್ತದೆ. ಆದುದರಿಂದ ಜಾತ್ರೆಯ ಬಹುತೇಕ ಸ್ಥಳಗಳು ವ್ಯಾಪಾರ ವ್ಯವಹಾರ ತಾಣಗಳಾಗಿ ರೂಪಿತಗೊಂಡಿರುತ್ತದೆ. ಇಂದು ಜಾತ್ರೆಗಳು ಜರಗುವ ಸ್ಥಳಗಳಲ್ಲಿ ವ್ಯಾಪಾರ ವ್ಯವಹಾರಕ್ಕಾಗಿಯೇ ಅಂಗಡಿ ಮಳಿಗೆಯನ್ನು ಕಟ್ಟಲಾಗಿದ್ದು, ಯಾವುದೇ ಜಾತಿ, ಧರ್ಮ, ಲಿಂಗವನ್ನು ಲೆಕ್ಕಿಸದೆ ಮಳಿಗೆಗಳು ಬಾಡಿಗೆಗೆ ಕೊಡುವುದು ಇತ್ತೀಚೆಗೆ ಹೆಚ್ಚು ಜಾರಿಯಲ್ಲಿದೆ. ಇದರ ಉಸ್ತುವಾರಿಯನ್ನು ನೋಡಿಕೊಂಡು ಹೋಗುವ ಇವುಗಳ ಮೇಲ್ವಿಚಾರಣೆಯ ಜವಾಬ್ದಾರಿಯು ಮುಜರಾಯಿ ಇಲಾಖೆಗೆ ವಹಿಸಿಕೊಡಲಾಗಿದೆ(ನಾಗೇಶ್ ೨೦೧೧: ೨೫-೨೬).

ಗುಲಬರ್ಗಾ ಜಿಲ್ಲೆಯ ಶರಣಬಸವೇಶ್ವರ ಹಾಗೂ ಬಂದೇನವಾಜರ ಜಾತ್ರೆ ಮತ್ತು ಉರುಸ್‌ಗಳಲ್ಲಿ ಅನೇಕ ವಿವಿಧ ಪ್ರಕಾರದ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಲಾಗುವುದು. ಸಿಹಿತಿಂಡಿ ಅಂಗಡಿಗಳು, ಮನೆಯ ಉಪಕರಣಗಳು ಇಲ್ಲಿ ದೊರೆಯುತ್ತವೆ. ಶರಣಬಸವೇಶ್ವರ ಜಾತ್ರೆಯಲ್ಲಿ ಅತಿ ಮುಖ್ಯವಾದ ಜಾತ್ರೆಯ ಕೂಟವೆಂದರೆ ಎತ್ತುಗಳ ವ್ಯಾಪಾರ. ಹತ್ತಾರು ಕಡೆಗಳಿಂದ ಜನರು ತಮ್ಮ ಸಾಕುಪ್ರಾಣಿಯ ವ್ಯಾಪಾರವನ್ನು ಮಾಡುವರು. ಜಾತ್ರೆಗಳು ಹಣಗಳಿಕೆಗೆ ಹೆಚ್ಚು ಮಹತ್ವವನ್ನು ಕೊಡುತ್ತವೆ. ಆದರೆ ಈ ಜಾಗತೀಕರಣ, ಆಧುನಿಕರಣ, ಖಾಸಗೀಕರಣ ಬಂಡವಾಳೀಕರಣ ಮತ್ತು ಉದಾರೀಕರಣಗಳಿಂದ ಜಾತ್ರೆಗಳು ನಶಿಸಿ ಹೋಗಬಹುದು. ಜಾತ್ರೆಗಳನ್ನು ಕೇವಲ ವ್ಯಾಪಾರ ಕೇಂದ್ರವಾಗಿ ನೋಡುತ್ತಿರುವ ಜನರು ದೈವತ್ವದಲ್ಲಿನ ನಂಬಿಕೆಯನ್ನು ನಿಂದನೆ ಮಾಡುತ್ತಿದ್ದಾರೆ (ಕರದಳ್ಳಿ, ೨೦೦೮: ೫೨, ನಾಗೇಶ್ ೨೦೧೧: ೬೨).

### ೪.೪. ಉಪಸಂಹಾರ

ಈ ಅಧ್ಯಯನದಲ್ಲಿ ಪ್ರಮುಖವಾಗಿ ಧರ್ಮ-ಧರ್ಮಗಳ ನಡುವಿನ ಕಲಹಗಳು ಹೇಗೆ ಹುಟ್ಟಿಕೊಂಡು ಜನರಲ್ಲಿ ವೈಷಮ್ಯತೆಯ ಭಾವನೆಗಳು ಬೇರು ಎಷ್ಟು ಆಳವಾಗಿ ನೆಲೆ ನಿಂತಿದ್ದರೂ ಸಹ ಕೆಲವು ಸಂದರ್ಭಗಳಲ್ಲಿ ಮುಸ್ಲಿಂ ಹಾಗೂ ಮುಸ್ಲಿಮೇತರ ಧರ್ಮಗಳಲ್ಲಿನ ಆಚರಣೆ ವಿಧಿ-ವಿಧಾನಗಳ ಸಾಮ್ಯತೆಯನ್ನು ಗಮನಿಸುವುದಾದರೆ ಸಂಘರ್ಷಗಳ ಆ ಕ್ಷಣದಲ್ಲಿ ಉದ್ಭವಗೊಂಡು ಮರೆಮಾಚುತ್ತವೆ. ಆದರೆ ಧರ್ಮ ಸಾಮರಸ್ಯವು ತಲ ತಲಾಂತರಗಳಿಂದ ಅನ್ಯೋನ್ಯತೆಯ ಸಂದೇಶವನ್ನು ಇಡೀ ಪ್ರಪಂಚದಾದ್ಯಂತ ಹರಡಿಸುವಲ್ಲಿ ಯಶಸ್ವಿಯ ಹೆಜ್ಜೆ ಇಟ್ಟಿದ್ದು ಅತಿ ಮಹತ್ವಪೂರ್ಣವಾದುದು.

## ಟಿಪ್ಪಣಿಗಳು

೧. ಗುಲಬರ್ಗಾ ಪ್ರದೇಶದಲ್ಲಿ ನಿಜಾಮ ಆಳ್ವಿಕೆಯ ಅವಧಿಯಲ್ಲಿ ಹಿಂದೂ-ಮುಸ್ಲಿಂ ಗಲಭೆಯಲ್ಲಿನ ಹಲವು ಸಂಘರ್ಷಗಳಲ್ಲಿ ಕೆಲವು ಘಟನೆಗಳನ್ನು ಕ್ರೋಡೀಕರಿಸಲಾಗಿದೆ. ಅದರಲ್ಲಿ ಶರಣಬಸವೇಶ್ವರ ಗೋಪುರದ ಕಳಶಾರೋಹಣ ಪ್ರಕರಣ ಬಹಳ ಮಹತ್ವಪೂರ್ಣವಾದುದು. ಮುಸ್ಲಿಂ ಧರ್ಮದಲ್ಲಿ ಮೊಹರಂ ತಿಂಗಳಲ್ಲಿ ಯಾವುದೇ ಪ್ರಕಾರದ ಶುಭಕಾರ್ಯಗಳು ನಡೆದಿರುವಾಗ ಹಿಂದೂಗಳು ಕೂಡ ಯಾವುದೇ ಕಾರ್ಯಕ್ರಮಗಳು ಮಾಡಕೂಡದೆಂದು ಅವರ ವಾದಗಳು ಇದಕ್ಕೆ ಪುಷ್ಟಿಯೆಂಬಂತೆ ಶರಣಬಸವೇಶ್ವರ ದೇವಾಲಯವು ಗುಲಬರ್ಗಾದ ಹಿಂದೂ ಜನಕ್ಕೆ ಮತ್ತು ಧರ್ಮಕ್ಕೆ ಪ್ರತೀಕವಾದುದು. ಅದಕ್ಕೋಸ್ಕರ ದೇವಾಲಯದ ಮೇಲೆ ಕಳಶಾರೋಹಣ ಮಾಡುವ ಉದ್ದೇಶ ಹೊಂದಿದ್ದನ್ನು ತಿಳಿದು ಮುಸ್ಲಿಂರ ರಜಾಕಾರರ ಪಡೆಯು ದೇವಾಲಯದ ಮೇಲೆ ದಾಳಿ ಮಾಡಿತು.

೨. ಜೈನರ ದಿಗಂಬರ ಸಮಾಜದ ಉತ್ಸವಕ್ಕೆ ತಡೆಯೊಡ್ಡಿದ ಕಾರಣ ಮುಸ್ಲಿಂ ಸಮುದಾಯದ ಆಚರಣೆಯ ಪಥದಲ್ಲಿ ತೊಂದರೆ ಉಂಟಾಗುವುದೆಂದು ಮಂಟಪವನ್ನು ತೆಗೆದು ಹಾಕಿದ ಸಂಗತಿ ಗುಲಬರ್ಗಾ ಜಿಲ್ಲೆಯ ಆಳಂದ ತಾಲೂಕಿನಲ್ಲಿ ಸಂಭವಿಸಿತ್ತು. ಮತ್ತೊಂದು ಘಟನೆಯು ಅದೇ ಆಳಂದ ತಾಲೂಕಿನಲ್ಲಿ ಜರುಗಿತ್ತು. ಹಿಂದೂ ದೇವಾಲಯದ ರಥೋತ್ಸವನ್ನು ತಡೆಯುವುದಕ್ಕಾಗಿ ಮುಸ್ಲಿಂ ಮತಾಂಧರು ಸೀಮೆ ಎಣ್ಣೆಯಿಂದ ರಥವನ್ನು ಸುಟ್ಟು ಹಾಕಿದ್ದು ಮತ್ತು ದೇವರ ಮೂರ್ತಿಯನ್ನು ಭಗ್ನಗೊಳಿಸಿದ ಪ್ರಕರಣ.

೩. ವೀರಶೈವ ಸಮಾಜ ಸಂಘಟನೆಯ ಸದಸ್ಯರ ಮೇಲೆ ದೌರ್ಜನ್ಯ.

೪. ಮುಸ್ಲಿಮರು ಶ್ರೀ ಶರಣಬಸವೇಶ್ವರ ದೇವಾಲಯದ ಗಂಟೆ ಶಬ್ದದಿಂದ ತಮ್ಮ ನಮಾಜ್ ಸಂದರ್ಭದಲ್ಲಿ ಭಗ್ನ ಉಂಟಾಗುತ್ತದೆ ಎಂದು ಅದನ್ನು ಖಂಡಿಸಿ ಮುಸ್ಲಿಂ ಜನರು ನಿಜಾಮನಿಂದ ಗಂಟೆ ಬಾರಿಸದಂತೆ ಫರ್ಮಾನ್ ಹೊರಡಿಸಿದ ಪ್ರಸಂಗವನ್ನು ಬಸವರಾಜ್ ಪೋಲಿಸ್ ಪಾಟೀಲರು ತಮ್ಮ 'ಬಿಡುಗಡೆ' ಕೃತಿಯಲ್ಲಿ ನಮೂದಿಸಿದ್ದಾರೆ.

೫. ಆರ್ಯ ಸಮಾಜದ ಸದಸ್ಯರು ಅಪರಾಧಿಗಳೆಂದು ಜೈಲು ಶಿಕ್ಷೆ ವಿದಿಸಿತು.

೬. ಕೋಮು ಗಲಭೆಗಳು ಹುಟ್ಟುವುದು ನಗರಗಳಲ್ಲೇ ಹೆಚ್ಚು.

೭. ಕೋಮ ಗಲಭೆಗಳಿಗೆ ಬುನಾದಿ ಹಾಕಿದ್ದು ಬ್ರಿಟಿಷರ 'ಒಡೆದು ಆಳುವ ನೀತಿ' ಉದಾಹರಣೆಗೆ, ರೈಲು ನಿಲ್ದಾಣಗಳಲ್ಲಿ ಹಿಂದೂ ಮುಸ್ಲಿಮರಿಗೆ ಪ್ರತ್ಯೇಕವಾದ ಕುಡಿಯುವ ನೀರಿನ ವ್ಯವಸ್ಥೆ ಮತ್ತು ಈ ಎರಡು ಧರ್ಮಗಳ ಕಂದಾಚಾರಗಳ ಬಗ್ಗೆ ಅಪಹಾಸ್ಯ ನುಡಿಯಿಂದ ಹಿಂದೂ-ಮುಸ್ಲಿಮರು ಹಿಂಸಾಚಾರದಲ್ಲಿ ತೊಡಗುವಂತೆ ಮಾಡಿದರು.

೮. ಸಂಘರ್ಷಗಳೆಂಬುದು ಕೇವಲ ಎರಡು ಗುಂಪುಗಳಿಂದಷ್ಟೆ ಅಲ್ಲ ಕಲ್ಪನೆ ದೂರವಾಗಿ ಹಿಂದೂಗಳಲ್ಲಿಯೂ ವರ್ಣವ್ಯವಸ್ಥೆ ಕಲ್ಪನೆಯಿಂದ ಬಹುಸಂಖ್ಯಾತ ಶೋಷಿತ ವರ್ಗ ಎಲ್ಲ ವಿಧದಿಂದ ತುಳಿಸಿಕೊಂಡಿದೆ. ಉದಾಹರಣೆಗಾಗಿ ಡಿಸೆಂಬರ್ ೬ ರಂದು ಬಾಬ್ರಿ ಮಸಿದಿ ಕೆಡವುದರ ಮೂಲಕ ದಲಿತ ವರ್ಗದ ಶಾಂತಿಯನ್ನು ಕದಡುವಲ್ಲಿ ಹಿಂದೂಗಳ ಪಾತ್ರವಿದೆ.

೯. ಹೋಳಿ ಹಬ್ಬದ ಪ್ರಕರಣ.

೧೦. ಸಾಮರಸ್ಯವೆಂಬುದು ಮುಸಲ್ಮಾನ ಸೂಫಿಗಳ ಐಕ್ಯತೆಯ ಪ್ರತೀಕ ಮತ್ತು ಆಚರಣೆಗಳಲ್ಲಿ ಸಾಮ್ಯತೆಯ ಅಂಶಗಳು.

೧೧. ನಿಜಾಮನ ಸೌಹಾರ್ದತೆಯ ಮನೋಭಾವನೆ ಕುರಿತು ಚರ್ಚಿಸಬಹುದಾಗಿದೆ.

೧೨. ಮುಸ್ಲಿಮರ ಆಚರಣೆಯಲ್ಲಿ ಹಿಂದೂಗಳ ಪಾಲುಗೊಳ್ಳುವಿಕೆ ಎಂದರೆ ರಂಜಾನ್ ಮೊಹರಂಗಳಂತಹ ಹಬ್ಬಗಳಲ್ಲಿ ಜಾತಿಭೇದವಿಲ್ಲದೆ ಒಂದಾಗಿ ಆಚರಿಸುವುದು ಕಂಡುಬರುತ್ತದೆ.

೧೩. ಹಿಂದೂ-ಮುಸ್ಲಿಂ ಸಾಮರಸ್ಯದ ಪ್ರತೀಕ, ಹಿಂದೂ ಧರ್ಮದ ಸಂತರುವು ಹೊಂದಿದ ಗುರು-ಶಿಷ್ಯರ ಬಾಂದವ್ಯ ಕುರಿತು ರಹಮತ್ ತರೀಕೆರಿ ೨೦೦೮ರಲ್ಲಿ "ಕರ್ನಾಟಕದ ಸೂಫಿಗಳು"ಎಂಬ ಕೃತಿಯನ್ನು ರಚಿಸಿದ್ದಾರೆ. ಬೀದರ್‌ನ ಅಷ್ಟೂರಿನ ಅಹಮ್ಮದ್ ಶಾಹವಲಿಯ ಉರುಸ್‌ನಲ್ಲಿ ಹಿಂದೂಗಳು ಆತನನ್ನು ಅಲ್ಲಮ ಪ್ರಭುವೆಂದು ಆಳಂದ

ತಾಲೂಕಿನ ಮಾಡ್ಯಳ ಗ್ರಾಮದಿಂದ ಪಾದಯಾತ್ರೆ ಕೈಗೊಳ್ಳುವುದು, ಸಾವಳಗಿಯ ಶಿವಲಿಂಗಸ್ವಾಮಿಗಳ ದೇವಾಲಯದಲ್ಲಿ ಖಾಜಾ ಬಂದೇನವಾಜ್‌ರ ಹೆಸರಿನಲ್ಲಿ ದೀನ್ ಜಗಾಯಿಸುವುದು ಪದ್ಧತಿ.

೧೪. ಸೂಫಿ ಸಂತರನ್ನು ಹಿಂದೂಕರಣ ಹೆಸರುಗಳಲ್ಲಿ ಕರೆಯುವುದು ಖಾಜಾ ಬಂದೇನವಾಜ್‌ನನ್ನು ಕೇಶವ ಚೈತನ್ಯ, ಆಳಂದ ಲಾಡ್ಲೆ ಮಶಾಯಿಕನನ್ನು ರಾಘವ ಚೈತನ್ಯವೆಂದು ಇತ್ಯಾದಿ ಸೂಫಿಗಳನ್ನು ಹಿಂದೂಗಳ ಹೆಸರನ್ನಿಟ್ಟು ಪೂಜಿಸುತ್ತಾರೆ.

೧೫. ಬಿಜಾಪುರದ ಸುಲ್ತಾನ್ ೨ನೇ ಇಬ್ರಾಹಿಂ ಆದಿಲ್‌ಷಾನ ಕೃತಿಯಲ್ಲಿ ಹಿಂದೂ ದೇವತೆಗಳನ್ನು ಕುರಿತು ಉಲ್ಲೇಖಿಸಿರುವುದು.

೧೬. "ಸಮ್ಮಿಶ್ರ ಸಂಸ್ಕೃತಿ" ಕುರಿತು ಜವಾಹರಲಾಲ್ ನೆಹರೂ ಅವರು ತಮ್ಮ ಕೃತಿ ಡಿಸ್ಕವರಿ ಆಫ್ ಇಂಡಿಯಾದಲ್ಲಿ ಸಾಮರಸ್ಯದ ಸಂಬಂಧವನ್ನು ಹೊಂದಿದವು ಎಂದು ಉಲ್ಲೇಖಿಸಿದ್ದಾರೆ.

೧೭. ಜಾಗತೀಕರಣದ ನೆಲೆಯಲ್ಲಿ ಹಿಂದೂ ಮುಸ್ಲಿಮರ ಸಾಮರಸ್ಯ.

* * *

ಬಹು ಸಂಸ್ಕೃತಿಗೆ ಹೆಸರಾದ ಗುಲಬರ್ಗಾದಲ್ಲಿ ಶರಣಬಸವೇಶ್ವರರಿಗೆ ಸಂಬಂಧಿಸಿದಂತೆ ಸಂಘ ಸಂಸ್ಥೆಗಳು ಹಾಗೂ ಖಾಜಾ ಬಂದೇನವಾಜ್‌ಗೆ ಸಂಬಂಧಿಸಿದ ಸಂಘ ಸಂಸ್ಥೆಗಳು ವರ್ತಮಾನ ಕಾಲದ ಸಾಂಸ್ಕೃತಿಕ ಅಭಿವ್ಯಕ್ತಿಗೆ ಸಂಕೇತಗಳಾಗಿವೆ. ಶರಣಬಸವೇಶ್ವರರ ಸಂಘ ಸಂಸ್ಥೆಗಳು ಮತ್ತು ಪ್ರಮುಖವಾಗಿ ಮಠಗಳು ವೀರಶೈವ ಸಂಪ್ರದಾಯಸ್ಥರ ಭಾವನಾತ್ಮಕ ಕೇಂದ್ರಗಳಾಗಿ ಬೆಳೆದಿರುವುದನ್ನು ಇಲ್ಲಿ ಗಮನಿಸಬಹುದು. ಹಾಗೆಯೇ ಒಂದಾನೊಂದು ಕಾಲದಲ್ಲಿ ಮುಸ್ಲಿಂ ಅರಸರ ಪೋಷಣೆಯಿಂದಾಗಿ ಸಬಲಗೊಂಡ ಖಾಜಾ ಬಂದೇನವಾಜ್ ಸಂಸ್ಥೆಗಳು ಇಂದಿಗೂ ಪ್ರಸ್ತುತವಾಗಿರುವುದನ್ನು ಗಮನಿಸಬಹುದು. ಮೇಲ್ನೋಟಕ್ಕೆ ಇವುಗಳು ದರ್ಗಾ ಮತ್ತು ಮಠವನ್ನು ಕೇಂದ್ರೀಕರಿಸಿಕೊಂಡು ಪ್ರಭಾವಶಾಲಿಯಾಗಿ ಸಾಂಸ್ಕೃತಿಕ ಗುರುತುಗಳಾಗಿ ಉತ್ತರ ಕರ್ನಾಟಕದ ಉದ್ದಕ್ಕೂ ತಮ್ಮ ವ್ಯಾಪ್ತಿಯನ್ನು ಹರಡಿಕೊಂಡಿರುವುದನ್ನು ಕಾಣಬಹುದು.

ದರ್ಗಾ ಮತ್ತು ಮಠಗಳ ಕೇಂದ್ರಿತವಾಗಿರತಕ್ಕಂತ ಜಾತ್ರೆಗಳು ಆರಂಭದ ದಿನಗಳಲ್ಲಿ ಇವುಗಳ ಪ್ರಭಾವದಿಂದ ಹೊರತಾಗಿಯೂ ಉರುಸ್ ಮತ್ತು ಜಾತ್ರೆಗಳು ನಡೆಯುತ್ತಿದ್ದವು. ಅವುಗಳು ಜನರ ಭಾವನೆ ಧಾರ್ಮಿಕ ಶ್ರದ್ಧೆ, ಆಧ್ಯಾತ್ಮಿಕತೆ ಶ್ರದ್ಧಾ ಕೇಂದ್ರಗಳಾಗಿದ್ದವು. ಈ ಕಾರಣಕ್ಕಾಗಿಯೇ ಇಂದಿಗೂ ಸಾವಿರಾರು ಜನರು ಲಿಂಗ ಭೇದವಿಲ್ಲದೆ ಜಾತ್ರೆ ಮತ್ತು ಉರುಸ್‌ಗಳಲ್ಲಿ ಪ್ರತಿವರ್ಷ ಸೇರುತ್ತಾರೆ. ಇವುಗಳು ಆ ಭಾಗದ ಜನರ ಶ್ರದ್ಧಾ ಕೇಂದ್ರಗಳಾಗಿ ಬೆಳೆದು ಬಂದ ಬಗೆ ಹೀಗೆ.

ಉರುಸ್ ಮತ್ತು ಜಾತ್ರೆಗಳು ಮೇಲ್ನೋಟಕ್ಕೆ ಒಂದೇ ಬಗೆಯ ಸ್ವರೂಪವನ್ನು ಹೊಂದಿದ್ದರೂ ಸಮುದಾಯಗಳ ಪಾಲ್ಗೊಳ್ಳುವಿಕೆಗೆ ಸಂಬಂಧಿಸಿದ ವಿಚಾರದಲ್ಲಿ ಭಿನ್ನತೆಯನ್ನು ಕಾಣಬಹುದಾಗಿದೆ. ಸಾಂಪ್ರದಾಯಿಕವಾಗಿ ಉರುಸ್‌ನ್ನು ಇಸ್ಲಾಂ ಧರ್ಮದ ಅಭಿವ್ಯಕ್ತವೆಂದು ಹಾಗೂ ಜಾತ್ರೆಯನ್ನು ಹಿಂದೂ ಧರ್ಮದ ಅಭಿವ್ಯಕ್ತವೆಂದು ಬಹುತೇಕ ವಿದ್ವಾಂಸರು ಪರಿಗಣಿಸಿರುವುದನ್ನು ನಾವು ಗಮನಿಸಬಹುದು. ಖಾಜಾ ಬಂದೇನವಾಜ್ ಉರುಸ್‌ನಲ್ಲಿ ಇಸ್ಲಾಮಿಗೆ ಸಂಬಂಧಿಸಿದ ಎಲ್ಲ ಸಮುದಾಯಗಳ ಮುಸ್ಲಿಮರು, ಹಿಂದೂಗಳು ಮತ್ತಿತರರೂ ಭಾಗವಹಿಸುವಂತೆ ಶರಣಬಸವೇಶ್ವರ ಜಾತ್ರೆಯಲ್ಲಿಯೂ ಎಲ್ಲ ಸಮುದಾಯಗಳ ಹಿಂದೂಗಳು ಮುಸ್ಲಿಮರು ಮತ್ತು ಇತರರು ಭಾಗವಹಿಸುವುದನ್ನು ನೋಡಬಹುದು. ಉರುಸ್ ಮತ್ತು ಜಾತ್ರೆಗಳಲ್ಲಿ ಈ ಕಾರಣಕ್ಕಾಗಿಯೇ ಆತಂರಿಕ ವೈರುಧ್ಯಗಳನ್ನು ಹೊಂದಿರುವ ಎರಡು ಧರ್ಮಗಳಿಗೆ ಸೇರಿದ ಜನರು ಭಾಗವಹಿಸುವಿಕೆ ಇಲ್ಲಿ

ಪ್ರಧಾನವಾಗಿರುತ್ತದೆ. ಕರ್ನಾಟಕದ ಬಹುತೇಕ ಕಡೆ ಈ ಬಗೆಯ ಸೌಹಾರ್ದತೆಯನ್ನು ಕಾಣುವುದು ಬಹಳ ವಿರಳ. ಹೀಗಾಗಿಯೇ ಉರುಸ್ ಮತ್ತು ಜಾತ್ರೆಯನ್ನು ಹಿಂದೂ ಮತ್ತು ಮುಸ್ಲಿಮರ ಐಕ್ಯತೆಯ ಸಾಂಸ್ಕೃತಿಕ ಕೊಂಡಿಯೆಂಬಂತೆ ನಂಬಲಾಗಿದೆ. ವಾಸ್ತವಿಕವಾಗಿ ಉರುಸ್‌ಗಳನ್ನು ತೆಗೆದುಕೊಂಡರೆ ಅಲ್ಲಿ ಬಹುತೇಕ ಹಿಂದೂ ಸಂಪ್ರದಾಯವನ್ನು ಪಾಲಿಸುತ್ತಿರುವ ಇಸ್ಲಾಂ ಧರ್ಮದ ಕೆಳ ಸಮುದಾಯದವರಾದ ಪಿಂಜಾರರು, ನದಾಫ್ ಮುಂತಾದ ಸಮುದಾಯಗಳು ಹೆಚ್ಚು ಸಕ್ರಿಯವಾಗಿರುವದು ಕಂಡುಬರುತ್ತದೆ. ಅವರಿಗೆ ಇರಬಹುದಾದ ಮುಕ್ತ ಮನಸ್ಸುಗಳಿಂದಾಗಿ ಹಾಗೂ ಹಳೆಯ ಸಂಬಂಧಗಳಿಂದಾಗಿ ಹಿಂದೂಗಳಲ್ಲಿನ ಬಹುತೇಕ ಕೆಳಜಾತಿಗಳು ಉರುಸ್‌ಗಳಲ್ಲಿ ಭಾಗವಹಿಸುವುದನ್ನು ಕಾಣಬಹುದು. ಹಾಗೆಯೇ ಜಾತ್ರೆಗಳಲ್ಲಿಯೂ ಕೂಡ ಹಿಂದೂ ಮತ್ತು ಇಸ್ಲಾಂಗಳ ಕೆಳ ಜಾತಿಗಳ ಅಥವಾ ವರ್ಗಗಳ ಭಾಗವಹಿಸುವಿಕೆಯೇ ಪ್ರಧಾನವಾಗಿರುವುದನ್ನು ಈ ಸಂದರ್ಭದಲ್ಲಿ ಗುರುತಿಸಬಹುದು. ಜಾತ್ರೆಗಳು ಹಿಂದೂಗಳ ಧಾರ್ಮಿಕ ದ್ಯೋತಕವೆಂದು ನಂಬಲಾಗಿದ್ದರು ಗುಲಬರ್ಗಾದ ಸಂದರ್ಭದಲ್ಲಿ ಅದು ವೀರಶೈವ ಮಠಾಧೀಪತಿಗಳ ನಿದರ್ಶನಕ್ಕೆ ಒಳಪಟ್ಟು ನಡೆಯುತ್ತಿರುವುದನ್ನು ಗಮನಿಸಬಹುದು. ಮಠಗಳ ಆಡಳಿತ, ಜಾತ್ರೆಯ ಸ್ವರೂಪ, ಮಠದ ನಿರ್ವಹಣೆ ಇತ್ಯಾದಿಗಳನ್ನು ನಿರ್ಧರಿಸುವದು ವಾಸ್ತವಿಕವಾಗಿ ವೀರಶೈವರ ಮೇಲ್ಜಾತಿಯ ಜನರಾಗಿದ್ದಾರೆ. ಅವರ ನಿರ್ದೇಶನದಂತೆ ಉಳಿದವರೂ ಅಂದರೆ ಬಹುತೇಕರು ನಡೆದುಕೊಳ್ಳುವುದನ್ನು ಪ್ರಸ್ತುತ ದಿನಗಳಲ್ಲಿ ಗಮನಿಸಬಹುದು. ಸಮಂಜಸವಲ್ಲವಾಗಿದೆ. ಜಾತ್ರೆಗಳಲ್ಲಿ ಮೇಲ್ಜಾತಿಗಳ ಭಾಗವಹಿಸುವಿಕೆ ಇಲ್ಲಿ ಅಷ್ಟಾಗಿ ಕಂಡುಬರದೇ ಇರುವುದನ್ನು ಇಲ್ಲಿ ಗಮನಿಸಬಹುದು. ದರ್ಗಾಕ್ಕೆ ಸಂಬಂಧಪಟ್ಟ ವಿಚಾರಗಳು ಇದಕ್ಕಿಂತ ಭಿನ್ನವಾಗಿಲ್ಲ. ಅದು ಕೂಡ ಇಸ್ಲಾಂ ಧರ್ಮದ ಉಚ್ಚ ಸಮುದಾಯಗಳ ನಿದರ್ಶನಕ್ಕೆ ಒಳಪಟ್ಟಿದೆ. ಇವರ ನಿದರ್ಶನಕ್ಕೆ ಒಳಪಟ್ಟ ಉರುಸ್‌ಗಳಲ್ಲಿ ಇಸ್ಲಾಂ ಮತ್ತು ಹಿಂದೂ ಧರ್ಮದ ಕೆಳಜಾತಿ ಸಮುದಾಯಗಳು ಭಾಗವಹಿಸುವುದನ್ನು ಇಲ್ಲಿ ಕಾಣಬಹುದಾಗಿದೆ.

ಗುಲಬರ್ಗಾದ ಜಾತ್ರೆ ಮತ್ತು ಉರುಸ್‌ಗಳಲ್ಲಿ ಕೆಳಜಾತಿಗಳಿಗೆ ಸೇರಿದ ಹಿಂದೂ, ಮುಸ್ಲಿಮರು ಭಾಗವಹಿಸುವಿಕೆಯಿಂದಾಗಿ ಆ ಎರಡು ಧರ್ಮಗಳ ಜನರ ಸಾಮರಸ್ಯವು ಕರ್ನಾಟಕ ಬೇರೆ ಪ್ರದೇಶಕ್ಕಿಂತ ಭಿನ್ನವಾಗಿದೆ. ಕರಾವಳಿ ಸೇರಿದಂತೆ ಬಹುತೇಕ ಕಡೆಗಳಲ್ಲಿ ನಡೆಯುವ ಜಾತ್ರೆ ಅಥವಾ ಉರುಸ್‌ಗಳಲ್ಲಿ ಆಯಾ ಧಾರ್ಮಿಕ ನಂಬಿಕೆಗಳು ಇರುವ ಜನರು ತಮ್ಮ ತಮ್ಮ ಜಾತ್ರೆ/ಉರುಸ್‌ಗಳಲ್ಲಿ ಸೇರುತ್ತಾರೆ. ಈ ಭಾಗಗಳಲ್ಲಿ ಹಿಂದೂ ಮತ್ತು ಮುಸ್ಲಿಮರು ಒಟ್ಟಾರೆ ಸೇರಿ ಉರುಸ್ ಮತ್ತು ಜಾತ್ರೆಗಳಲ್ಲಿ ಭಾಗವಹಿಸುವುದು ಅತ್ಯಂತ ವಿರಳ. ಹೀಗಾಗಿ ಖಾಜಾ ಬಂದೇನವಾಜ್ ಉರುಸ್ ಮತ್ತು ಶರಣಬಸವೇಶ್ವರ ಜಾತ್ರೆಗಳ ಸಾಂಸ್ಕೃತಿಕ ಅಧ್ಯಯನವು ಕರ್ನಾಟಕದ ಸಾಂಸ್ಕೃತಿಕ ಅಧ್ಯಯನವನ್ನು ಅರ್ಥಮಾಡಿಕೊಳ್ಳುವುದಕ್ಕೆ ಪೂರಕವಾಗಿದೆ ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ.

* * *

# ಅನುಬಂಧ

೧. ಪರಾಮರ್ಶನ ಗ್ರಂಥಗಳು

೨. ನಕ್ಷೆಗಳು

೩. ಶರಣಬಸವೇಶ್ವರರ ಕುರಿತು ಸಂಕ್ಷಿಪ್ತ ಮಾಹಿತಿ

೪. ಖಾಜಾ ಬಂದೇನವಾಜ್ ಕುರಿತು ಸಂಕ್ಷಿಪ್ತ ಮಾಹಿತಿ

೫. ಛಾಯಾಚಿತ್ರಗಳು

## ೧. ಪರಾಮರ್ಶನ ಗ್ರಂಥಗಳು


೧. ಅಬುಲ್ ಆಲಾ ಮೌದೂದಿ, ಖುತ್‌ಬಾತ್ ಇಸ್ಲಾಮೀನ ಬುನಾದಿಗಳು, ಶಾಂತಿ ಪ್ರಕಾಶನ, ಮಂಗಳೂರು, ೨೦೦೩

೨. ಅಬ್ದುಲ್ ಹಮೀದ್, ಬಂದೇನವಾಜ್, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೪

೩. ಇಬ್ರಾಹಿಂ ಮುಲ್ಲಾ ಎಂ, ಕರ್ನಾಟಕದ ಉರುಸುಗಳು, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ ೨೦೦೭-೨೦೦೮

೪. ಇಬ್ರಾಹಿಂ ಸಈದ್, ಸಹಸ್ರ ಪ್ರವಾದಿ ವಚನಗಳು, ಶಾಂತಿ ಪ್ರಕಾಶನ, ಮಂಗಳೂರು, ೨೦೦೫

೫. ಕೃಷ್ಣಪ್ಪ ಕೆ., ಸಂಸ್ಕೃತಿಯ ಅಂತರ್‌ಶಿಸ್ತೀಯ ನೆಲೆಗಳು, ಸಂಯಮ ಪ್ರಕಾಶನ, ಹೊಸಕೋಟೆ, ೨೦೦೮

೬. ಗುರುಖಾದರಿ ಪೀರಾ, ಜ್ಞಾನ ಸಮುದ್ರ, ಸೂಫಿ ಶರಣರ ಸಂಧಿ, ಬಳ್ಳಾರಿ, ೨೦೦೦

೭. ಗೋಪಾಲರಾವ್ ಹೇಜೀಬ್, ಹೈದರಾಬಾದ್ ಮುಕ್ತಿ ಸಂಘರ್ಷ, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು ೨೦೦೧

೮. ಗೋವಿಂದರಾಜು ಸಿ.ಆರ್., (ಸಂ)., ಚರಿತ್ರೆ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೭

೯. ಚಂದ್ರಕಾಂತ ಕರದಳ್ಳಿ, ಖಾಜಾ ಬಂದೇನವಾಜರು, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ, ೨೦೦೫

೧೦. ಚಪ್ಪರಬಂದ್ ಆರ್.ಪಿ., ಬಿಜಾಪುರ ಜಿಲ್ಲೆಯ ಜಾತ್ರೆಗಳು, ಪ್ರಕಾಶನ, ಗುಲ್ಜಾರ್ ಜಹಾಂ ಯಾಸ್ಮಿನ್, ಬಿಜಾಪುರ, ೨೦೦೬

೧೧. ಚಿದಾನಂದಮೂರ್ತಿ.ಎಂ., ಕರ್ನಾಟಕ ಸಂಸ್ಕೃತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೭

೧೨. ಚೆನ್ನಣ್ಣ ವಾಲೀಕಾರ, ಹೈದ್ರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಜಾನಪದೀಯ ಅಧ್ಯಯನ, ವಾಲೀಕಾರ ವಿರಸಂ ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ ಗುಲಬರ್ಗಾ, ೧೯೯೮

೧೩. ಜಯತೀರ್ಥ ರಾಜಪುರೋಹಿತ, ಖಾಜಾ ಬಂದಾನವಾಜ, ಐಬಿಎಚ್ ಪ್ರಕಾಶನ, ಗಾಂಧೀನಗರ, ಬೆಂಗಳೂರು, ೨೦೦೫

೧೪. ಜಯಶ್ರೀ ದಂಡೆ, ಖಾಜಾ ಬಂದೇನವಾಜ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫

೧೫. ದಸ್ತಗೀರ್ ಅಲಿಭಾಯಿ, ಮುಸ್ಲೀಮರ ಹಬ್ಬ ಮತ್ತು ಉರುಸುಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೬

೧೬. ನಹಿಮ್ ಸಿದ್ದಿಕಿ, ಮಾನವ ಕುಲದ ವಿಮೋಚಕ, ಶಾಂತಿ ಪ್ರಕಾಶನ, ಬೆಂಗಳೂರು, ೨೦೦೪

೧೭. ಪಾಟೀಲ ಎಂ.ಬಿ., ಕರ್ನಾಟಕ ರಾಜ್ಯಗ್ಯಾಸೆಟಿಯರ್, ಗುಲಬರ್ಗಾ ಜಿಲ್ಲೆ, ಗೀತಾಂಜಲಿ ಪ್ರಿಂಟರ್ಸ್, ಬೆಂಗಳೂರು, ೧೯೯೭

೧೮. ಪೋತೆ ಎಚ್.ಟಿ. (ಸಂ)., ಕೋಮು ಸೌಹಾರ್ದತೆ, ಅಂಬು ಪ್ರಕಾಶನ ಸ್ನಾತಕೋತ್ತರ ಕೇಂದ್ರ, ರಾಯಚೂರು, ೨೦೦೦

೧೯. ಫಕೀರ್ ಮಹ್ಮದ್ ಕಟ್ಪಾಡಿ, ಸೂಫಿ ಸಂತರು, ಅಂಕಿತ ಪ್ರಕಾಶನ, ಬೆಂಗಳೂರು, ೨೦೧೦

೨೦. ಬಸವರಾಜ ಪೋಲಿಸ್ ಪಾಟೀಲ, (ಸಂ)., ಬಿಡುಗಡೆ, ಅಮರ ಪ್ರಕಾಶನ, ಬಡೇಪುರ ಕಾಲೋನಿ, ವಿಶ್ವವಿದ್ಯಾಲಯ ಮಾರ್ಗ, ಗುಲಬರ್ಗಾ, ೨೦೦೨

೨೧. ಬರದೂರ ಸಾಹೇಬ ಆರ್.ಎಂ. ಗುಲಬರ್ಗಾ ಶರೀಫ ಹಜರತ್ ಖಾಜಾ ಬಂದಾನವಾಜರ ಜೀವನ ಚರಿತ್ರೆ, ಅಕ್ಕಿ ಪ್ರಕಾಶನ, ಗದಗ, ೧೯೮೧

೨೨. ಭಾಲಚಂದ್ರ ಜಯಶೆಟ್ಟಿ, ಹೈದರಾಬಾದ್ ಕರ್ನಾಟಕದ ವಿಮೋಚನಾ ಚಳುವಳಿ, ಪ್ರಕಾಶನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬

೨೩. ಭಾಸ್ಕರ್ ಟಿ.ಎಂ. ಸಂ., ಕಲಬುರ್ಗಿ ಜಿಲ್ಲಾ ದರ್ಶನ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ ೨೦೦೫

೨೪. ಮಕಾನದಾರ ಎ.ಎಸ್. ಕಣಕೆ ಎಂ.ಐ. (ಸಂ)., ವಿಶ್ವಭ್ರಾತೃತ್ವದ ಸೂಫಿ ದೂದ ಪಿರಾಂ ದೂದ ಪೀರಾಂ ಪ್ರಕಾಶನ, ಗದಗ, ೨೦೦೫

೨೫. ಮಲ್ಲಿಕಾರ್ಜುನ ಶಿ.ಲಠ್ಠೆ, ಪೂಜ್ಯ ದೊಡ್ಡಪ್ಪ ಅಪ್ಪ, ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ, ೨೦೦೨

೨೬. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೨೭. ಲಕ್ಷ್ಮಣ್ ತೆಲಗಾವಿ, ಸ್ಥಳೀಯ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೨೮. ವೀರಭದ್ರಪ್ಪ.ಬಿ.ವಿ, ಪವಾಡ ಪರೀಕ್ಷೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೦

೨೯. ಶಂಕರನಾರಾಯಣ ತೀ.ನಂ., ಜಾನಪದ ಸಮೀಕ್ಷೆಯ ವಿಶ್ಲೇಷಣೆ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೯೯.

೩೦. ಶಾರದಾಪ್ರಸಾದ್ ಎನ್.ಎಸ್. ಅನು., ಭಾರತದ ಪ್ರೌಢ ಇತಿಹಾಸ, ಪ್ರಸಾರಾಂಗ, ಮಾನಸಗಂಗೋತ್ರಿ ವಿಶ್ವವಿದ್ಯಾಲಯ, ಮೈಸೂರು, ೨೦೦೩

೩೧. ಶಿವಕುಮಾರಸ್ವಾಮಿ ಸಿ.ಎಸ್., (ಸಂ)., ಕರ್ನಾಟಕ ಜಾತ್ರೆಗಳು, ಪ್ರಸಾರಾಂಗ, ಮಾನಸಗಂಗೋತ್ರಿ ಮೈಸೂರು, ೧೯೯೪

೩೨. ಶಿವರುದ್ರ ಟಿ.ಆರ್., ಶ್ರೀ ಕೃಷ್ಣದೇವರಾಯ, ಚೇತನಗಂಗಾ ಪ್ರಕಾಶನ, ದಾವಣಗೆರೆ, ೨೦೦೯

೩೩. ಶೈಲಜಾ ಎಚ್.ಎಮ್. ಮತ್ತು ರಾಜೀವ ಪಿ. ಗುಂಡೋಲೆ, ಭಾರತೀಯ ತಾತ್ವಿಕ ಪರಂಪರೆ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೫

೩೪. ಷಹಸೀನಾ ಬೇಗಂ, ಕರ್ನಾಟಕ ಮುಸ್ಲಿಂ ಜಾನಪದ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦.

೩೫. ಷೇಖ್ ಅಲಿ ಬಿ., ಸೂಫೀಸಂತರು, ಕಮ್ಯಾಂಡರ್ ಪ್ರಕಾಶನ, ಬೆಂಗಳೂರು, ೨೦೦೪

೩೬. ಸೂರ್ಯನಾಥ ಕಾಮತ್, ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಎಂ.ಸಿ.ಸಿ. ಪ್ರಕಾಶನ, ಬೆಂಗಳೂರು, ೨೦೦೫

೩೭. ಹಂಪಾ ನಾಗರಾಜಯ್ಯ, ಕರ್ನಾಟಕ ಜಾತ್ರೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೫

೩೮. ಹಿರೇಮಠ ಎಸ್.ಎಸ್.(ಸಂ)., ಕರ್ನಾಟಕ ಸಂಸ್ಕೃತಿ ಪರಂಪರೆ, ಸಮತಾ ಪ್ರಕಾಶನ, ಹರಪನಹಳ್ಳಿ, ೧೯೯೨

೩೯. ಹಿರೇಮಠ ಎಸ್.ಎಮ್., ಕರ್ನಾಟಕ ದಲಿತ ಸಂಸ್ಕೃತಿ ಭಾಗ-೨, ಜಾತ್ರೆಗಳು, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೩

೪೦. ಹೆಬ್ಬಾಲೆ ಕೆ. ನಾಗೇಶ್, ಬಹುಸಂಸ್ಕೃತಿ ಮತ್ತು ದೇಸಿ ಜಾತ್ರೆಗಳ ಮಹಾಸಮನ್ವಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

**ಇಂಗ್ಲೀಷ್ ಕೃತಿಗಳು**

೧. Asghar Ali Enginer (ed.), Sufism and communal Hormony, Printwel, Jaipur, 1991

೨. Mohamed Sulemani sidigi The Bahamani Sufis, Indria Adobiy Delhi, 1989

೩. Ramzan Darga, "The Saint who came from Bagdad" Deccan Herald, 5-2-1995

೪. Saiyid Athar Abbas Rizvi, History of Sufism in India, Munishiram Mohanlal Pub. Pvt. Ltd, Delhi, 1986

**ಅಪ್ರಕಟಿತ ಆಕರಗಳು**

೧. ಜಗನ್ನಾಥ ಎಸ್. ಹೆಬ್ಬಾಲೆ, ಹೈದರಾಬಾದ್ ಕರ್ನಾಟಕ ಜಾತ್ರೆಗಳು, ಪಿ.ಎಚ್‌ಡಿ, ಪ್ರಬಂಧ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೨. ತಡಕಲ್ ಎಸ್.ಆರ್., ಗುಲಬರ್ಗಾ ಜಿಲ್ಲೆಯ ವೀರಶೈವ ಸಾಂಸ್ಕೃತಿಕ ಕೇಂದ್ರಗಳು, ಎಂ.ಫಿಲ್ ನಿಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೬

೩. ಪಡಶೆಟ್ಟಿ ಎಂ.ಎಂ., ತಿಂತಿಣಿ ಮೋನಪ್ಪಯ್ಯ : ಒಂದು ಅಧ್ಯಯನ, ಪಿಎಚ್.ಡಿ ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೦

೪. ಬಸವಲಿಂಗ ಸೊಪ್ಪಿಮಠ, ಕೊಡೇಕಲ್ಲ ಬಸವಣ್ಣ : ಒಂದು ಅಧ್ಯಯನ, ಪಿ.ಎಚ್‌ಡಿ ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೮.

೫. ಮಲ್ಲಿಕಾರ್ಜುನಗೌಡ ಎಂ., ಕರ್ನಾಟಕ ಆಂಧ್ರದ ಗಡಿಭಾಗದಲ್ಲಿನ ಹಿಂದೂ ಮುಸ್ಲಿಂ ಸಾಂಸ್ಕೃತಿಕ ಬಾಂಧವ್ಯ, ಪಿಎಚ್.ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೬. ಮಹೇಶ ಪಾಟೀಲ ಸೂಗೂರ, ಜನಪದ ಸಾಹಿತ್ಯದಲ್ಲಿ ಮಹಾದಾಸೋಹಿ ಶ್ರೀ ಶರಣಬಸವೇಶ್ವರರು, ಪಿಎಚ್.ಡಿ ಪ್ರಬಂಧ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೧೦

೭. ಮೋರಟಗಿ ಜಿ.ಎಸ್., ಮುಸ್ಲಿಂ ಹಬ್ಬಗಳು ಮತ್ತು ಆಚರಣೆಗಳು : ಒಂದು ಅಧ್ಯಯನ, ಪಿಎಚ್.ಡಿ ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೬

೮. ಯಮನೂರಪ್ಪ ಅಣ್ಣಿಗೇರಿ, ಧರ್ಮಸಹಿಷ್ಣು ಕೇಂದ್ರಗಳ ತಾತ್ವಿಕ ನೆಲೆಗಳು ಹಾಗೂ ಪರಂಪರೆ : ಒಂದು ಅಧ್ಯಯನ, ಪಿಎಚ್.ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೯. ರಾಜಶೇಖರ, ಚರಿತ್ರೆ ಲೇಖನಶಾಸ್ತ್ರ ಗುಲಬರ್ಗಾ ಪ್ರದೇಶದ ಅಧ್ಯಯನ, ಎಂ.ಫಿಲ್. ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯-೧೦

೧೦. ಸಿದ್ಧಣ್ಣ ಎಸ್. ಕುಂಬಾರ, ಶಹಾಪೂರ ಪರಿಸರದ ಶಾಸನ ಮತ್ತು ದೇವಾಲಯಗಳ ಸಾಂಸ್ಕೃತಿಕ ಅಧ್ಯಯನ, ಎಂ.ಫಿಲ್. ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯-೧೦

೧೧. ಹಣಮಂತ್ರಾಯ, ಗುಲಬರ್ಗಾ ಜಿಲ್ಲೆಯ ರೈತ ಚಳುವಳಿಗಳು: ಚಾರಿತ್ರಿಕ ಅಧ್ಯಯನ, ಎಂ.ಫಿಲ್ ನಿಬಂಧ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೯-೧೦.

* * *

ಅವಿಭಜಿತ ಗುಲಬರ್ಗಾ ಜಿಲ್ಲೆ (೧೯೫೬-೨೦೧೦)



## ೩. ಶರಣಬಸವೇಶ್ವರ ಕುರಿತು ಸಂಕ್ಷಿಪ್ತ ಮಾಹಿತಿ

| | | |
|---|---|---|
| ಜನನ | : | ೧೭೪೬ |
| ತಂದೆ ತಾಯಿ | : | ಮಲಕಪ್ಪ ಮತ್ತು ಸಂಗಮ್ಮ |
| ಜನ್ಮಸ್ಥಳ | : | ಗುಲಬರ್ಗಾ ಜಿಲ್ಲೆಯ ಜೇವರ್ಗಿ ತಾಲೂಕಿನ ಅರಳಗುಂಡಿಗೆ ಗ್ರಾಮ |
| ಸಾಕುತಂದೆ | : | ಆದಪ್ಪ |
| ಮನೆತನದ ಹೆಸರು | : | ಸಾಲೋಕ್ಯ |
| ಮನೆದೇವರು | : | ಗುಡುಗಂಟೆಯ ಅಮರೇಶ್ವರ |
| ಗುರುಗಳು | : | ಕಲಕೇರಿಯ ಮರುಳಸಿದ್ಧರು |
| ವಿದ್ಯಾಭ್ಯಾಸದ ಗುರುಗಳು | : | ಚರಂತಿಸ್ವಾಮಿ |
| ಪತ್ನಿಯರು | : | ಬಾವಿ ಮನೆತದ ಮಹಾದೇವಮ್ಮ ಮತ್ತು ನಾಸಿ ಮನೆತನದ ಚೆನ್ನಬಸಮ್ಮ |
| ಮರಣ | : | ಕ್ರಿ.ಶ. ೧೮೨೨ |

ಶರಣಬಸವೇಶ್ವರ ದಾಸೋಹ ಪೀಠಾಧಿಪತಿಗಳ ವಿವರ

೧. ಶರಣಬಸವೇಶ್ವರರು ಮೂಲ ಪುರುಷರು (ಕ್ರಿ.ಶ. ೧೭೪೬-೧೮೨೨)

೨. ಆದಿ ದೊಡ್ಡಪ್ಪ ಶರಣ (ಕ್ರಿ.ಶ. ೧೮೨೨-೧೮೪೬)

೩. ಎರಡನೆಯ ಶರಣಬಸವಪ್ಪ ಅಪ್ಪ (ಕ್ರಿ.ಶ. ೧೮೪೬-೧೮೭೧)

೪. ಬಸವಣ್ಣಪ್ಪ ಅಪ್ಪ (ಕ್ರಿ.ಶ. ೧೮೭೧-೧೮೭೮)

೫. ಲಿಂಗಬಸವಪ್ಪ ಅಪ್ಪ (ಕ್ರಿ.ಶ. ೧೮೭೮-೧೮೯೭)

೬. ಮೂರನೆಯ ಶರಣಬಸವಪ್ಪ ಅಪ್ಪ (ಕ್ರಿ.ಶ. ೧೮೯೭-೧೯೦೩)

೭. ಪೂಜ್ಯ ದೊಡ್ಡಪ್ಪ ಅಪ್ಪ (ಕ್ರಿ.ಶ. ೧೯೦೩-೧೯೮೩)

೮. ಪೂಜ್ಯ ಡಾ. ಶರಣಬಸವಪ್ಪ ಅಪ್ಪ (ಕ್ರಿ.ಶ. ೧೯೮೩- ಪ್ರಸ್ತುತ ಇರುವವರು)

## ೪. ಖಾಜಾ ಬಂದೇವಾಜ್ ಕುರಿತು ಸಂಕ್ಷಿಪ್ತ ಮಾಹಿತಿ

| | |
|---|---|
| ಖಾಜಾ ಬಂದೇನವಾಜ್ ಮೂಲ ಹೆಸರು | : ಸಯ್ಯದ್ ಮಹಮ್ಮದ್ ಅಲ್ ಹುಸೇನಿ |
| ಜನ್ಮಸ್ಥಳ ಮತ್ತು ಕಾಲ | : ದೆಹಲಿ ಕ್ರಿ.ಶ.೩ನೇ ಜುಲೈ, ೧೩೨೧ |
| ತಂದೆಯ ಹೆಸರು | : ಸಯ್ಯದ್ ಯೂಸೂಫ್ ಹುಸೇನಿ |
| ತಾಯಿಯ ಹೆಸರು | : ಸಯಿದಾ ಬೀಬಿರಾಣಿ |
| ಗುರುಗಳು | : ಹಜರತ್ ಖಾಜಾ ನಸೀರುದ್ದೀನ್ ಮಹಮ್ಮದ್ ಚಿರಾಘ್ ದೆಹಲವಿ |
| ಬಿರುದುಗಳು | : ಗೇಸೂದರಾಜ್, ಬಂದೇನವಾಜ್ |
| ಹೆಂಡತಿಯ ಹೆಸರು | : ಬೀಬಿ ರಜಾ ಖಾತೂನ್ |
| ಗುಲಬರ್ಗಾಕ್ಕೆ ಆಗಮನ | : ಬಹಮನಿ ಸುಲ್ತಾನ್ ಫಿರೋಜ್ ಶಾಹನ ಆಹ್ವಾನದ ಮೇರೆಗೆ |

ಖಾಜಾ ಬಂದೇನವಾಜ್ ಮತ್ತು ಕುಸನೂರಿನ ಸಿದ್ಧಯ್ಯಪ್ಪಸ್ವಾಮಿಯ ಸಂಬಂಧ

ಖಾಜಾ ಬಂದೇನವಾಜ್ ಜೊತೆಗೆ ಸಾವಳಗಿಯ ಶಿವಲಿಂಗೇಶ್ವರಸ್ವಾಮಿ ಸಂಬಂಧ

ಖಾಜಾ ಬಂದೇನವಾಜ್ ಮತ್ತು ರಟಗಲ್ ರೇವಣ ಸಿದ್ಧೇಶ್ವರಸ್ವಾಮಿ ಸಂಬಂಧ

ಖಾಜಾ ಬಂದೇನವಾಜ್ ಹಾಗೂ ಶರಣ ಬಸವೇಶ್ವರ ನಡುವೆ ಅನ್ಯೋನ್ಯತೆ

| | |
|---|---|
| ಮರಣ | : ಕ್ರಿ.ಶ.೧೪೨೨ |
| ಸಮಾಧಿ ಸ್ಥಳದ ಹೆಸರು | : 'ಸಿಲಫೇನ' ಅಥವಾ ಶಿಲ್ಪಾಗ್ರಾಮ |
| ಖಾಜಾ ಬಂದೇನವಾಜ್ ಉರುಸ್ | : ನಿಜಾಮ ವಂಶಸ್ಥರಿಂದ ಬರುವ ಸಂಧಲ್(ಗಂಧ) |



ಗುಲಬರ್ಗಾ ಖಾಜಾ ಬಂದೇನವಾಜ್ ದರ್ಗಾ



ಗುಲಬರ್ಗಾ ಶರಣಬಸವೇಶ್ವರ ದೇವಾಲಯ



ಗುಲಬರ್ಗಾ ಶರಣಬಸವೇಶ್ವರ ಜಾತ್ರಾ ಮಹೋತ್ಸವ(೨೦೧೨)




ಖಾಜಾ ಬಂದೇನವಾಜ್ ಉರುಸ್ ಆಚರಣೆ(೨೦೧೧)



ಖಾಜಾ ಬಂದೇನವಾಜ್ ದರ್ಗಾದ ಸಂಧಲ್ ಮೆರವಣಿಗೆ(೨೦೧೧)



ಶರಣಬಸವೇಶ್ವರ ದೇವಾಲಯದ ಆವರಣದ ಬಸವಣ್ಣ ದೇವಾಲಯ



ಶರಣಬಸವೇಶ್ವರ ಮತ್ತು ಮರಳುಸಿದ್ಧ ಸ್ವಾಮಿ ಚಿತ್ರ



ಶರಣಬಸವೇಶ್ವರರ ಅನ್ನದಾಸೋಹ ಮಹಾಮನೆ




ಗುಲಬರ್ಗಾ ಶರಣಬಸವೇಶ್ವರ ದೇವಾಲಯ



ಗುಲಬರ್ಗಾ ಖಾಜಾ ಬಂದೇನವಾಜ್ ಪ್ರವೇಶ ದ್ವಾರ

